ರವೀಂದ್ರರ ಕತೆಗಳು : ೫

# ಡಾಲಿಯಾ ಮತ್ತು ಇತರ ಕತೆಗಳು

ಅನುವಾದಕರು

ಅ. ನಾರಾಯಣಸ್ವಾಮಿ ಅಯ್ಯರ್

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ



ಕವಿ ರವೀಂದ್ರರು

# ದಾಲಿಯಾ

## ಪೀಠಿಕೆ

ಪರಾಜಿತನಾದ ಷಾಸೂಜನು ಔರಂಗಜೇಬನ ಭಯದಿಂದ ಓಡಿಹೋಗಿ ಅರಕಾನ್ ರಾಜನ ಆತಿಥ್ಯವನ್ನು ಅಂಗೀಕರಿಸಿದನು. ಸಂಗಡ ಮೂವರು ಸುಂದರಿಯರಾದ ಹೆಣ್ಣುಮಕ್ಕಳುಗಳಿದ್ದರು ರಾಜಪುತ್ರರುಗಳೊಡನೆ ಅವರುಗಳ ಮದುವೆಯಾಗಲೆಂದು ಅರಕಾನ್ ರಾಜನ ಬಯಕೆಯಿತ್ತು. ಈ ವಿಷಯ ಪ್ರಸ್ತಾಪಿಸಿದಾಗ ಷಾಸೂಜ ಅತಿಯಾದ ಅಸಂತೋಷ ತೋರ್ಪಡಿಸಲು, ಒಂದು ದಿನ ರಾಜನ ಅಪ್ಪಣೆಯಿಂದ ಅವರುಗಳನ್ನು ಮೋಸದಿಂದ ದೋಣಿಯಲ್ಲಿ ನದಿಯ ಮಧ್ಯೆ ಕರೆದುಕೊಂಡುಹೋಗಿ ದೋಣಿ ಮುಳುಗಿಸಿಬಿಡುವ ಪ್ರಯತ್ನಮಾಡುವರು. ಆ ಸಂಕಟದ ಸಮಯದಲ್ಲಿ ಕಿರಿಯ ಮಗಳು ಅಮೀನಳನ್ನು ತಂದೆ ತನ್ನ ಕೈಯಾರ ನದಿಯಲ್ಲಿ ಹಾಕುವನು. ಹಿರಿಯ ಮಗಳು ಆತ್ಮಹತ್ಯೆ ಮಾಡಿಕೊಂಡು ಸಾಯುವಳು. ಷಾಸೂಜಾನ ನಂಬಿಕೆಗೆ ಪಾತ್ರನಾದ ಕೆಲಸದವ ರಹಮತ್ ಆಲಿ ಜುಲೇಖಾಳನ್ನು ಕರೆದುಕೊಂಡು ಈಜುತ್ತ ತಪ್ಪಿಸಿಕೊಂಡು ಹೋಗುವನು. ಸೂಜಾ ಯುದ್ಧಮಾಡುತ್ತ ಸಾಯುವನು.

ಅಮೀನಾ ಪ್ರವಾಹದಲ್ಲಿ ತೇಲಿಕೊಂಡುಹೋಗಿ ದೈವವಶಾತ್ ಶೀಘ್ರದಲ್ಲೇ ಬೆಸ್ತರವನೊಬ್ಬನ ಬಲೆಗೆ ಸಿಕ್ಕಿ ಬದುಕಿಕೊಂಡು ಅವನ ಮನೆಯಲ್ಲೇ ರಕ್ಷಿತಳಾಗಿ ದೊಡ್ಡವಳಾಗುವಳ .

ಈ ನಡುವೆ ಮುದುಕ ರಾಜ ಸಾಯುವನು. ಯುವರಾಜ ಪಟ್ಟಾಭಿಷಿಕ್ತನಾಗಿರುವನು.

೧

ಒಂದು ದಿನ ಬೆಳಗ್ಗೆ ಮುದುಕ ಬೆಸ್ತರವನು ಬಂದು ಅಮೀನಳನ್ನು ಗದರಿಸುತ್ತ 'ತಿನ್ನೀ' ಎಂದನು. ಬೆಸ್ತರವ ಅರಕಾನ್ ಭಾಷೆಯಲ್ಲಿ ಅಮೀನಳಿಗೆ 'ತಿನ್ನೀ' ಎಂದು ಹೊಸ ನಾಮಕರಣ ಮಾಡಿದ್ದನು. "ತಿನ್ನೀ, ಇವತ್ತು ಬೆಳಗ್ಗೆ ನಿನಗೆ ಏನಾಗಿದೆ. ಕೆಲಸಕಾರ್ಯಕ್ಕೆ ಸಂಪೂರ್ಣವಾಗಿ ಕೈಯೇ

ಹಾಕಿಲ್ಲವಲ್ಲ. ನನ್ನ ಹೊಸ ಬಲೆಗೆ ಗಂಜಿ ಸವರಿಲ್ಲ. ನನ್ನ ದೋಣಿಗೆ—" ಎಂದನು.

ಅವಿಗಾನಾ ಬೆಸ್ತರವನ ಬಳಿಗೆ ಬಂದು ಪ್ರೀತಿಯಿಂದ "ಅಜ್ಜಾ, ಇವತ್ತು ನನ್ನ ಅಕ್ಕ ಬಂದಿರುವಳು. ಅದರಿಂದ ಬಿಡುವು" ಎಂದಳು.

"ನಿನಗೆ ಅಕ್ಕ ಬೇರೆ ಎಲ್ಲಿಂದ ಬಂದಳು, ತಿನ್ನೀ."

ಜುಲೇಖ ಎಲ್ಲಿಂದಲೋ ಹೊರಕ್ಕೆ ಬಂದವಳು—'ನಾನು' ಎಂದಳು.

ಮುದುಕ ಮೂಕನಾದನು. ಅನಂತರ ಜುಲೇಖಳ ಹತ್ತಿರಕ್ಕೆ ಬಂದು ಚೆನ್ನಾಗಿ ಅವಳ ಮುಖ ನೋಡತೊಡಗಿದನು.

ಥಟ್ಟನೆ "ನೀನು ಕೆಲಸಬೊಗಸ ಏನಾದರೂ ಬಲ್ಲೆಯೋ" ಎಂದು ಕೇಳಿದನು.

ಅವಿಗಾನಳು—"ಅಜ್ಜಾ, ಅಕ್ಕನಿಗಾಗಿ ನಾನು ಕೆಲಸಮಾಡುವೆ. ಅಕ್ಕ ಕೆಲಸಮಾಡಲಾರಳು" ಎಂದಳು.

ಮುದುಕ ಸ್ವಲ್ಪ ಯೋಚಿಸಿ "ನೀನು ಎಲ್ಲಿ ವಾಸಿಸುವೆ?" ಎಂದು ಕೇಳಿದನು.

ಜುಲೇಖಾ—"ಅವಿಗಾನಳ ಹತ್ತಿರ" ಎಂದಳು.

ಮುದುಕ ಇದೂ ಒಂದು ದೊಡ್ಡ ವಿಪತ್ತೇ ಎಂದು ಯೋಚಿಸಿದನು. "ನೀನು ಏನು ತಿನ್ನುವೆ" ಎಂದು ಕೇಳಿದನು.

ಜುಲೇಖಳು "ಅದಕ್ಕೆ ದಾರಿಯಿದೆ" ಎಂದು ಅಲಕ್ಷ್ಯಭಾವದಿಂದ ಮಾದಿ ಬೆಸ್ತರವನ ಇದಿರಿನಲ್ಲಿ ಸ್ವರ್ಣಮುದ್ರೆಯೊಂದನ್ನು ಎಸೆದಳು.

ಅವಿಗಾನಾ ಅದನ್ನು ಎತ್ತಿ ಬೆಸ್ತರವನ ಕೈಯಲ್ಲಿಟ್ಟು ಪಿಸುಮಾತಿನಲ್ಲಿ "ಅಜ್ಜಾ, ನೀನು ಏನೂ ಹೇಳಬೇಡ. ಕೆಲಸಕ್ಕೆ ಹೋಗು, ಹೊತ್ತಾಯಿತು" ಎಂದಳು.

ಜುಲೇಖಳು ವೇಷ ಬದಲಾಯಿಸಿಕೊಂಡು ನಾನಾಕಡೆ ತಿರುಗಿ ಕೊನೆಗೆ ಅವಿಗಾನಾಳ ನೆಲೆ ಅರಿತು ಬೆಸ್ತನ ಗುಡಿಸಲಿಗೆ ಬಂದು ಸೇರಿದಳೆಂಬ ಕತೆಯನ್ನು ವಿವರಿಸಿ ಹೇಳಹೊರಟರೆ, ಇನ್ನೊಂದು ಕತೆಯೇ ಆಗಹೋಗುವುದು. ಅವಳ ರಕ್ಷಕ ರಹಮತ್ ಹೆಸರು ಮಾರ್ಪಡಿಸಿಕೊಂಡು ಅರಕಾನ್ ರಾಜನ ಸಭೆಯಲ್ಲಿ ಕೆಲಸಮಾಡುತಿದ್ದನು.

೨

ಸಣ್ಣ ನದಿ ಹರಿಯುತ್ತಿತ್ತು. ಬೇಸಗೆಯ ಆರಂಭದಲ್ಲಿ ಬೆಳಗಿನ ತಂಗಾಳಿಗೆ ಗಿಡಗಳ ಕೆಂಬಣ್ಣದ ಹೂಗಳು ಉದುರುತಿದ್ದುವು.

ಮರದ ಬುಡದಲ್ಲಿ ಕುಳಿತು ಜುಲೇಖಾ ಅಮೀನಾಳ ಸಂಗಡ "ದೇವರು ನಮ್ಮಿಬ್ಬರನ್ನು ಸಾವಿನ ದವಡೆಯಿಂದ ಬದುಕಿಸಿರುವನಲ್ಲ; ಅದು ಕೇವಲ ತಂದೆಯ ಕೊಲೆಯ ಸೇಡು ತೀರಿಸಿಕೊಳ್ಳುವುದಕ್ಕಾಗಿ. ಅದಲ್ಲದೆ ಬೇರೆ ಯಾವ ಕಾರಣವೂ ತೋರುವುದಿಲ್ಲ" ಎಂದಳು.

ಅಮೀನಾ ನದಿಯ ಆಚೆಯ ದಡದಲ್ಲಿ ಅತ್ಯಂತ ದೂರದಲ್ಲಿ ಎಲ್ಲಕ್ಕೂ ಹೆಚ್ಚು ದಟ್ಟವಾಗಿದ್ದ ವನಶ್ರೇಣಿಯನ್ನು ನೋಡುತ್ತ ಮೆಲ್ಲಮೆಲ್ಲನೆ "ಅಕ್ಕಾ, ಇನ್ನು ಅಂತಹ ಮಾತುಗಳನ್ನೆಲ್ಲ ಆಡಬೇಡವಮ್ಮ. ನನಗೆ ಈ ಪ್ರಪಂಚವೇ ಒಂದು ವಿಧದಲ್ಲಿ ನೆಮ್ಮದಿಯಾಗಿರುತ್ತದೆ. ಸಾಯಬಯಸುವುದಾದರೆ ಗಂಡ ಸರು ಕಡಿದಾಡಿ ಸಾಯಲಿ. ನನಗೆ ಇಲ್ಲಿ ಯಾವ ಸಂಕಟವೂ ಇಲ್ಲ" ಎಂದಳು.

ಜುಲೇಖ "ಛೀ, ಛೀ, ಅಮೀನಾ, ನೀನೇನು ಸಮ್ರಾಟರ ಮಗನ ಮಗಳೇನು, ದಿಲ್ಲಿಯ ಸಿಂಹಾಸನ ಎಲ್ಲಿ, ಮತ್ತೆ ಅರಕಾನಿನ ಬೆಸ್ತರವನ ಈ ಗುಡಿಸಲೆಲ್ಲಿ" ಎಂದಳು.

ಅಮೀನಾ ನಕ್ಕು—"ಅಕ್ಕಾ, ದಿಲ್ಲಿಯ ಸಿಂಹಾಸನಕ್ಕಿಂತ ಈ ಮುದುಕನ ಗುಡಿಸಲು ಮತ್ತು ಈ ಗಿಡದ ನೆರಳು ಯಾವ ಹುಡುಗಿಗಾದರೂ ಹೆಚ್ಚು ಆನಂದಕರವಾಗಿದ್ದುದಾದರೆ ಅದಕ್ಕಾಗಿ ದಿಲ್ಲಿಯ ಸಿಂಹಾಸನ ಕಣ್ಣೀರು ಕರೆಯದು" ಎಂದಳು.

ಜುಲೇಖ ತನ್ನಷ್ಟಕ್ಕೆ ತಾನೆ ಅಷ್ಟು ಅಷ್ಟು ಅಮೀನಳೊಡನೆ ಹೇಳುತ್ತ "ಅದು ನಿನ್ನ ತಪ್ಪಲ್ಲ. ಆಗ ನೀನು ಅತ್ಯಂತ ಸಣ್ಣವಳಾಗಿದ್ದೆ. ಆದರೆ ಒಮ್ಮೆ ಯೋಚಿಸಿ ನೋಡು. ತಂದೆಯವರು ನಿನ್ನನ್ನು ಹೆಚ್ಚಾಗಿ ಪ್ರೀತಿಸುತಿದ್ದುದರಿಂದಲೇ ತಮ್ಮ ಕೈಯಾರ ನಿನ್ನನ್ನು ನದಿಯಲ್ಲಿ ಮುಳುಗಿಸಿದ್ದರು. ಆ ಪಿತೃದತ್ತ ಮೃತ್ಯುವಿಗಿಂತ ಈ ಬಾಳುವೆ ಹೆಚ್ಚು ಪ್ರಿಯವೆಂದು ಎಣಿಸದಿರು. ಆದರೆ ಮುಯ್ಯಿ ತೀರಿಸಿಕೊಳ್ಳುವುದಾದರೆ ಆಗಲೀಗ ಬದುಕಿದುದು ಸಾರ್ಥಕವಾದೀತು" ಎಂದಳು.

ಅವಿನಾಶಾ ತೆಪ್ಪನೆ ದೂರದ ಕಡೆಗೆ ನೋಡುತ್ತ ನಿಂತಿದ್ದಳು. ಆದರೆ ಇಷ್ಟು ಹೇಳಿಯೂ ಈ ಹೊರಗಣ ವಾಯು, ಮರದ ನೆರಳು ಮತ್ತು ತನ್ನ ನವಯೌವನ ಮತ್ತು ಯಾವುದೋ ಒಂದು ಸುಖದ ಸವಿನೆನಪು ಅವಳನ್ನು ಆವರಿಸಿಕೊಂಡಿತ್ತೆಂದು ಚೆನ್ನಾಗಿ ಅರಿವಾಗುತಿತ್ತು.

ಸ್ವಲ್ಪ ಹೊತ್ತಿನಮೇಲೆ ನಿಟ್ಟುಸಿರುಬಿಟ್ಟು "ಅಕ್ಕಾ, ನೀನು ಸ್ವಲ್ಪ ಕುಳಿತಿರು. ನನಗೆ ಮನೆಗೆಲಸವಿದೆ. ನಾನು ಅಡಿಗೆ ಮಾಡಿಡದಿದ್ದರೆ ಮುದುಕ ಊಟಮಾಡಲಾರ" ಎಂದಳು.

೩

ಜುಲೇಖೆ ಅವಿನಾಶೆಯ ಸ್ಥಿತಿ ಯೋಚಿಸುತ್ತ ಗಾಢವಾದ ಚಿಂತೆಯಲ್ಲಿ ಮುಳುಗಿ ತೆಪ್ಪನೆ ಕುಳಿತಿದ್ದಳು. ಈ ಸಮಯದಲ್ಲಿ ಹಠಾತ್ತಾಗಿ ಧಪ್ಪನೆ ನೆಗೆದ ಸದ್ದಾಯಿತು. ಹಿಂದಿನಿಂದ ಯಾರೋ ಜುಲೇಖಳ ಕಣ್ಣು ಮುಚ್ಚಿದರು.

ಜುಲೇಖೆ ನಡುಗುತ್ತ ಎದ್ದುನಿಂತು "ಯಾರದು ?" ಎಂದಳು.

ದನಿ ಕೇಳಿ ಯುವಕ ಕಣ್ಣು ಮುಚ್ಚಿದ್ದನ್ನು ಬಿಟ್ಟು ಇದಿರಿನಲ್ಲಿ ಬಂದು ನಿಂತನು—ಜುಲೇಖಳ ಮುಖ ನೋಡಿ ಅಮ್ಲಾನವದನನಾಗಿ "ನೀನಂತೂ ತಿನ್ನೀ ಅಲ್ಲವಲ್ಲ" ಎಂದನು. ಜುಲೇಖೆ ತಾನು "ತಿನ್ನೀ" ಎಂದು ತೋರಿಸಿ ಕೊಳ್ಳಲು ಯತ್ನಿಸಿದಂತೆಯೂ, ಯುವಕನ ಅಸಾಮಾನ್ಯ ಬುದ್ಧಿಯಿಂದ ಅದು ಗೊತ್ತಾಗಿಬಿಟ್ಟಂತೆಯೂ ತೋರ್ಪಡಿಸಿಕೊಂಡನು.

ಜುಲೇಖೆ ಬಟ್ಟೆ ಸರಿಪಡಿಸಿಕೊಂಡು ದೀಪ್ತಭಾವದಿಂದ ಎದ್ದುನಿಂತು ಕಣ್ಣುಗಳಿಂದ ಬೆಂಕಿ ಕಾರತೊಡಗಿದಳು. "ನೀನು ಯಾರು ?" ಎಂದು ಕೇಳಿದಳು.

ಯುವಕ—"ನೀನು ನನ್ನನ್ನು ಗುರ್ತಿಸಲಾರೆ. ತಿನ್ನೀ ಬಲ್ಲಳು, ತಿನ್ನೀ ಎಲ್ಲಿ" ಎಂದನು.

ತಿನ್ನೀ ಗದ್ದಲ ಕೇಳಿ ಹೊರಗೆ ಬಂದಳು. ಜುಲೇಖಳ ರೋಷ ಯುವಕನ ಹತಬುದ್ಧಿ ಮತ್ತು ವಿಸ್ಮಿತಮುಖ ನೋಡಿ ಅವಿನಾಶೆ ಗಟ್ಟಿಯಾಗಿ ನಗತೊಡಗಿದಳು.

"ಅಕ್ಕಾ, ಅವನ ಮಾತನ್ನು ನೀನು ಲಕ್ಷಿಸಬೇಡ. ಅವನು ಮನುಷ್ಯನೇನು ಅವನೊಂದು ಕಾಡುಪ್ರಾಣಿ. ಏನಾದರೂ ಮರ್ಯಾದೆ ತಪ್ಪಿರುವನಾದರೆ ನಾನು ಅವನಿಗೆ ಶಿಕ್ಷಿಸುವೆ. "ಡಾಲಿಯಾ, ನೀನೇನು ಮಾಡುತ್ತಿದ್ದೆ" ಎಂದಳು.

ಯುವಕ ತಕ್ಷಣ "ಕಣ್ಣು ಮುಚ್ಚಿದೆ. ಅವಳು ತಿನ್ನಿಯೆಂದು ನಾನು ಎಣಿಸಿದ್ದೆ; ಆದರೆ ಅವಳು ತಿನ್ನೀ ಅಲ್ಲ" ಎಂದನು.

ತಿನ್ನೀ ಆಕ್ಷಣ ಅತ್ಯಂತ ಕೋಪ ತೋರಿದಳು—"ಮತ್ತೆ ನೋಡು! ಸಣ್ಣ ಬಾಯಲ್ಲಿ ದೊಡ್ಡ ಮಾತು. ನೀನು ಎಂದು ತಿನ್ನಿಯ ಕಣ್ಣು ಮುಚ್ಚಿದ್ದೆ. ನಿನಗೆ ಸಾಹಸವೇನೂ ಕಡಮೆಯಿಲ್ಲವಲ್ಲ" ಎಂದಳು.

ಯುವಕನು—"ಕಣ್ಣು ಮುಚ್ಚಲು, ಮುಖ್ಯವಾಗಿ ಮಂಚಿ ಅಭ್ಯಾಸವಿದ್ದರೆ ಹೆಚ್ಚು ಸಾಹಸದ ಆವಶ್ಯಕತೆಯಿಲ್ಲವಲ್ಲ. ಆದರೆ ನಿಜ ಹೇಳುತ್ತೇನೆ ತಿನ್ನೀ. ಇವತ್ತು ಹೆದರಿಕೆಯಾಗಿತ್ತು" ಎಂದನು.

ಹೀಗೆ ಹೇಳಿ ಗುಟ್ಟಾಗಿ ಜುಲೇಖೆಯು ಕಡೆಗೆ ಬೆರಳು ತೋರಿ ಅವಿನಾಶಳ ಮುಖದ ಕಡೆ ನೋಡುತ್ತ ಸದ್ದಿಲ್ಲದೆ ನಗತೊಡಗಿದನು.

ಅವಿನಾಶೆ ಹೇಳಿದಳು—"ಇಲ್ಲ, ನೀನು ಮಹಾ ಅನಾಗರಿಕ. ಷಾಹಜಾದೆಯರ ಇದಿರಿನಲ್ಲಿ ನಿಲ್ಲಲು ತಕ್ಕವನಲ್ಲ. ನಿನಗೆ ಕಠಿಣ ಶಿಕ್ಷೆ ವಿಧಿಸಬೇಕಾದುದು ಆವಶ್ಯಕ ನೋಡು, ಈ ರೀತಿಯಲ್ಲಿ ಸಲಾಮು ಮಾಡು" ಎಂದಳು.

ಹೀಗೆ ಹೇಳಿ ಅವಿನಾಶಾ ತನ್ನ ಯೌವನದಲ್ಲಿ ಕಾಲಿಟ್ಟಿದ್ದ ದೇಹವನ್ನು ಅತಿ ಮಧುರಭಂಗಿಯಲ್ಲಿ ಬಾಗಿಸಿ ಜುಲೇಖಳಿಗೆ ಸಲಾಮು ಮಾಡಿದಳು. ಯುವಕ ಅತಿಕಷ್ಟದಿಂದ ಅವಳು ಮಾಡಿದಂತೆ ತಪ್ಪುತಪ್ಪಾಗಿ ಮಾಡಿದನು.

"ಈ ರೀತಿಯಲ್ಲಿ ಮೂರು ಹೆಜ್ಜೆ ಹಿಂದಕ್ಕೆ ಬಾ" ಎಂದಳು. ಯುವಕ ಹಿಂದಕ್ಕೆ ಸರಿದನು.

"ಪುನಃ ಸಲಾಮು ಮಾಡು." ಮತ್ತೆ ಸಲಾಮು ಮಾಡಿದನು.

ಈ ರೀತಿಯಲ್ಲಿ ಹಿಂದಕ್ಕೆ ಸರಿಯುತ್ತ, ಸಲಾಮು ಮಾಡಿಸುತ್ತ, ಅವಿನಾಶಾ ಯುವಕನನ್ನು ಗುಡಿಸಲ ಬಾಗಲ ಬಳಿಗೆ ಕರೆದುಕೊಂಡು ಹೋದಳು.

"ಮನೆಯೊಳಕ್ಕೆ ಹೋಗು" ಎಂದಳು. ಯುವಕ ಒಳಗೆ ಹೋದನು.

ಅಮಿನಾ ಹೊರಗಿನಿಂದ ಮನೆಯ ಕದ ಮುಚ್ಚಿಕೊಂಡು "ಸ್ವಲ್ಪ ಮನೆಗೆಲಸ ಮಾಡು. ಒಲೆ ಉರಿ ನೋಡಿಕೊ." ಎಂದು ಹೇಳಿ ಅಕ್ಕನ ಹತ್ತಿರ ಬಂದು ಕುಳಿತಳು.

"ಅಕ್ಕಾ, ಕೋಪಗೊಳ್ಳಬೇಡ. ಇಲ್ಲಿಯ ಜನರೇ ಹೀಗೆ. ಮೈ ಉರಿಸುವರು" ಎಂದಳು.

ಆದರೆ ಅಮಿನಳ ಮುಖದಲ್ಲಾಗಲೀ ನಡವಳಿಕೆಯಲ್ಲಾಗಲೀ ಮೈ ಉರಿಯುವ ಲಕ್ಷಣ ಸ್ವಲ್ಪವೂ ಕಂಡುಬರಲಿಲ್ಲ. ಮೇಲಾಗಿ ಅನೇಕ ವಿಷಯಗಳಲ್ಲಿ, ಇಲ್ಲಿಯ ಪುರುಷರ ವಿಷಯದಲ್ಲಿ, ಅವಳು ಸ್ವಲ್ಪ ಹೆಚ್ಚು ಪಕ್ಷಪಾತ ತೋರುತ್ತಿದ್ದುದು ಕಾಣುತಿತ್ತು.

ಜುಲೇಖ ನಾಚ್ಯಮಾನವಾಟ್ಟಿಗೆ ಕೋಪ ತೋರಿ "ನಿಜವಾಗಿ ಅಮಿನಾ, ನಿನ್ನ ನಡವಳಿಕೆಯಿಂದ ನಾನು ಆಶ್ಚರ್ಯಗೊಂಡಿರುವೆ. ಹೊರಗಿನ ಯುವಕನೊಬ್ಬ ಬಂದು ನಿನ್ನನ್ನು ಮುಟ್ಟುವುದೇ? ಅವನಿಗೆ ಇಷ್ಟರಮಟ್ಟಿನ ಸಾಹಸವೇ?" ಎಂದಳು.

ಅಮಿನಾ ಅಕ್ಕನ ಮಾತಿಗೆ ಸಮ್ಮತಿ ಸೂಚಿಸುತ್ತ, "ಇಲ್ಲಿ ಕೇಳು ಅಕ್ಕಾ, ಯಾವನಾದರೂ ಬಾದಶಹರ ಅಥವಾ ನವಾಬರ ಮಗ ಹೀಗೆ ನಡೆದುಕೊಂಡಿದ್ದನಾದರೆ, ಆಗ ಅವನನ್ನು ಅವಮಾನಪಡಿಸಿ ದೂರ ಅಟ್ಟುತ್ತಿದ್ದೆ" ಎಂದಳು.

ಜುಲೇಖಳಿಗೆ ನಗು ತಡೆಯಲಾಗಲಿಲ್ಲ. ನಗುತ್ತ "ನಿಜ ಹೇಳು ತಂಗಿ, ಪ್ರಪಂಚ ನಿನಗೆ ಆನಂದಕರವಾಗಿದೆಯೆಂದು ಹೇಳಿದೆಯಲ್ಲ, ಅದೇನು ಈ ಅನಾಗರಿಕ ಯುವಕನಿಗಾಗಿಯೇನು?" ಎಂದು ಕೇಳಿದಳು.

ಅಮಿನಾ "ನಿಜ ಹೇಳುವೆ ಅಕ್ಕ—ಅವನು ನನಗೆ ಬಹಳ ಉಪಕಾರ ಮಾಡುತ್ತಾನೆ. ಹಣ್ಣು ಹೂವುಗಳನ್ನು ಕಿತ್ತು ತರುತ್ತಾನೆ. ಬೇಟೆಯಾಡಿ ತರುತ್ತಾನೆ. ಯಾವ ಕೆಲಸವನ್ನಾದರೂ ಮಾಡಲು ಕರೆದರೆ ಓಡಿಬರುತ್ತಾನೆ. ಅವನನ್ನು ಶಿಕ್ಷಿಸಬೇಕೆಂದು ಹಲವು ಬಾರಿ ಯೋಚಿಸಿದ್ದೆ. ಆದರೆ ಆ ಪ್ರಯತ್ನ ವ್ಯರ್ಥ. ಕಣ್ಣುಗಳನ್ನು ಪೂರ್ತ ಕೆಂಪಗೆ ಮಾಡಿಕೊಂಡು, ದಾಲಿಯಾ, ನಿನ್ನ ವಿಷಯದಲ್ಲಿ ನಾನು ಬಹಳ ಅಸಂತುಷ್ಟಳಾಗಿರುವೆನು"

ಎಂದು ಹೇಳಿದೆನಾದರೆ ಅವನು ಅತಿ ಕುತೂಹಲದೊಡನೆ ಮುಖ ನೋಡುತ್ತ ಸದ್ದಿಲ್ಲದೆ ನಗುವನು. ಇವರುಗಳ ಜೀವನದಲ್ಲಿ ಹಾಸ್ಯವೆಂದರೆ ಹೀಗೆಯೇ ಏನೊ. ಎರಡು ಏಟು ಕೊಟ್ಟೆನೆಂದರೆ ಬಹಳ ಆನಂದಪಡುವನು. ಅದನ್ನು ಪರೀಕ್ಷಿಸಿ ನೋಡಿರುವೆ. ಇದೋ ನೋಡು, ಮನೆಯೊಳಗೆ ಕೂಡಿರುವೆ— ಬಹಳ ಆನಂದದಿಂದಿರುವನು. ಕದ ತೆರೆದನಾದರೆ ಕಣ್ಣು ಮುಖ ಕೆಂಪಗೆ ಮಾಡಿಕೊಂಡು ನೆಮ್ಮದಿಯಿಂದ ಬೆಂಕಿ ಉರಿಸುತ್ತಿರುವುದನ್ನು ಕಾಣಬಹುದು. ಇವನನ್ನು ಕಟ್ಟಿಕೊಂಡು ಏನುತಾನೆ ಮಾಡಲಿ ಹೇಳು ಅಕ್ಕಾ—ನಾನಂತೂ ಸೋತುಹೋಗಿರುವೆ—" ಎಂದಳು.

"ನಾನು ಪ್ರಯತ್ನಪಟ್ಟು ನೋಡುತ್ತೇನೆ" ಎಂದಳು ಜುಲೇಖಿ.

ಅಮಿನಾಸಾ ನಕ್ಕು ಬೇಡುತ್ತ—"ನಿನ್ನ ಕಾಲಿಗೆ ಬೀಳುತ್ತೇನೆ. ಅಕ್ಕಾ —ನೀನು ಅವನಿಗೆ ಇನ್ನೇನೂ ಹೇಳಬೇಡ" ಎಂದಳು.

ಅವಳು ಹೇಳಿದ ರೀತಿ ಆ ಯುವಕ ಅವಳು ಸಾಕಿದ್ದ ಕಾಡಜಿಂಕೆ, ಅದು ಇನ್ನೂ ತನ್ನ ಕಾಡನಡತೆ ಬಿಟ್ಟಿಲ್ಲ. ಹೊಸಬರನ್ನು ಕಂಡರೆ ತಪ್ಪಿಸಿಕೊಂಡು ಹೋದೀತು ಎಂಬ ಭಯವಿರುವಂತೆ ಇತ್ತು.

ಈ ಸಮಯದಲ್ಲಿ ಬಿಸ್ತರವನು ಬಂದು, "ಇಂದು ದಾಲಿಯಾ ಬರಲಿಲ್ಲ ವೇನು ?" ಎಂದು ಕೇಳಿದನು.

"ಬಂದಿದಾನೆ."

"ಎಲ್ಲಿ ಹೋಗಿದಾನೆ."

"ಅವನು ಬಹಳ ಹಿಂಸೆಮಾಡಿದ. ಅದಕ್ಕೇ ಅವನನ್ನು ಈ ಕೋಣೆ ಯಲ್ಲಿ ಕೂಡಿಹಾಕಿರುವೆನು."

ಮುದುಕ ಸ್ವಲ್ಪ ವ್ಯಥೆಯಿಂದ "ಬೇಸರಗೊಳಿಸಿದರೆ ಸೈರಿಸಿಕೊ. ದಾಲಿಯಾ ನಿನ್ನೆ ಒಂದು ಖಲೂ (ಸ್ವರ್ಣಮುದ್ರೆ) ಕೊಟ್ಟು ನನ್ನ ಹತ್ತಿರ ದಿಂದ ಮೂರು ಮಿನಾನುಗಳನ್ನು ಕೊಂಡಿದ್ದ" ಎಂದನು.

ಅಮಿನಾಸಳು—"ಯೋಚಿಸಬೇಕಾಗಿಲ್ಲ ಅಜ್ಜಾ—ಇಂದು ನಾನು ಅವನ ಹತ್ತಿರದಿಂದ ಎರಡು ಖಲೂ ವಸೂಲು ಮಾಡುತ್ತೇನೆ. ಒಂದು ಮಿನಾನನ್ನೂ ಕೊಡಬೇಕಾಗಿರದು" ಎಂದಳು.

ಮುದುಕ ತನ್ನ ಸಾಕುಮಗಳಿಗೆ ಇಷ್ಟು ಸಣ್ಣ ವಯಸ್ಸಿನಲ್ಲಿ, ಇಷ್ಟೊಂದು ಚಾತುರ್ಯ ಮತ್ತು ವ್ಯವಹಾರ ಜ್ಞಾನ ಇರುವುದನ್ನು ಕಂಡು ಬಹಳ ಸಂತೋಷಗೊಂಡು ಅವಳ ತಲೆಯಮೇಲೆ ಪ್ರೀತಿಯಿಂದ ಕೈ ಆಡಿಸಿ ಹೊರಟುಹೋದನು.

೪

ಆಶ್ಚರ್ಯದ ಸಂಗತಿಯೆಂದರೆ, ದಾಲಿಯಾ ಬಂದು ಹೋಗುವ ವಿಷಯದಲ್ಲಿ ಜುಲೇಖಳಿಗಿದ್ದ ಆಕ್ಷೇಪಣೆ ಕ್ರಮೇಣ ಮಾಯವಾದದ್ದು ಯೋಚಿಸಿ ನೋಡಿದರೆ, ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಯಾಕೆಂದರೆ, ನದಿಗೆ ಒಂದು ದಿಕ್ಕಿಗೆ ಪ್ರವಾಹವಿದ್ದರೆ ಮತ್ತೊಂದು ದಿಕ್ಕಿನಲ್ಲಿ ದಡವಿರುವಂತೆಯೇ ರಮಣಿಯ ಹೃದಯಾವೇಗ ಮತ್ತು ಲೋಕಾಪವಾದದ ಅಂಜಿಕೆ. ಆದರೆ ಸಭೆ ಸಮಾಜಗಳಿಂದ ದೂರವಾದ ಈ ಅರಕಾನ್ ಪ್ರಾಂತದಲ್ಲಿ ಲೋಕಾಪವಾದದ ಸಂದರ್ಭವೆಲ್ಲಿ?

ಇಲ್ಲಿ ಕೇವಲ ಋತುವನ್ನನುಸರಿಸಿ ಗಿಡಬಳ್ಳಿಗಳು ಚಿಗುರಿ ಮೊಗ್ಗು ಕಚ್ಚುವವು. ಪಕ್ಷಿಗಳ ಉಲ್ಲಾಸದ ದನಿ ಮಳೆಗಾಲದಲ್ಲಿ ಉಬ್ಬಿ, ಶರತ್ಕಾಲದಲ್ಲಿ ಕುಗ್ಗಿ, ಗ್ರೀಷ್ಮದಲ್ಲಿ ಕ್ಷೀಣವಾಗಿ ಹೋಗುವವು. ಪಕ್ಷಿಗಳ ಉಲ್ಲಾಸದ ಕಂಠಸ್ವರದಲ್ಲಿ ಆಕ್ಷೇಪಣೆ ಸ್ವರ ಎಳ್ಳಷ್ಟೂ ಇರದು. ದಕ್ಷಿಣದ ಗಾಳಿ ನಡುನಡುವೆ ಆಚೆಯ ತೀರದ ಗ್ರಾಮದಿಂದ ಜನಸಮುದ್ರದ ಕೋಲಾಹಲ ಧ್ವನಿ ಹೊತ್ತು ತರುತ್ತಿತ್ತು. ಆದರೆ ಪಿಸುಮಾತನ್ನು ತರುತ್ತಿರಲಿಲ್ಲ.

ಬಿದ್ದುಹೋದ ಪ್ರಾಸಾದದಮೇಲೆ ಕ್ರಮೇಣ ಕಾಡು ಬೆಳೆಯುವಂತೆ ಇಲ್ಲಿ ಕೆಲವು ದಿನಗಳಿದ್ದುದಾದರೆ ಪ್ರಕೃತಿಯ ಗುಪ್ತ ಆಕ್ರಮಣದಿಂದ ಲೌಕಿಕತೆಯ ಮನುಷ್ಯ ನಿರ್ಮಿತ ಗೋಡೆ ಕ್ರಮೇಣ ಕಣ್ಣಿಗೆ ಕಾಣಿಸದ ರೀತಿಯಲ್ಲೇ ಮುರಿದುಬೀಳುವುದು; ಮತ್ತು ನಾಲ್ಕು ದಿಕ್ಕಿನಲ್ಲೂ ಪ್ರಾಕೃತಿಕ ಪ್ರಪಂಚದೊಡನೆ ಎಲ್ಲವೂ ಒಂದೇ ರೂಪು ಧರಿಸುತ್ತ ಬರುವುದು. ಇಬ್ಬರು ಸರಿವಯಸ್ಸಿನ ಗಂಡು ಹೆಣ್ಣು ಕಲೆತು ಮಾತನಾಡುವ ನೋಟ ರಮಣಿಯರಿಗೆ ಚೆಂದ ತೋರುವಂತೆ ಬೇರೆ ಯಾವುದೂ ತೋರದು. ಇಷ್ಟು ರಹಸ್ಯ, ಇಷ್ಟೊಂದು ಸುಖ. ಆದಕಾರಣ ಈ ಅನಾಗರಿಕ ಕುಟೀರದಲ್ಲಿ ನಿರ್ಜನ ದಾರಿದ್ರ್ಯದ ನಡುವೆ ಜುಲೇಖೆಯ ಕುಲದ ಹೆಮ್ಮೆ ಮತ್ತು ಲೋಕಾಪವಾದದ ಭೀತಿ ಕ್ರಮೇಣ

ಶಿಥಿಲವಾಗುತ್ತಾ ಬಂದಾಗ ಹೂಗಳಿಂದ ತುಂಬಿದ ಆ ಗಿಡದ ನೆರಳಲ್ಲಿ ಅಮೀನಾ ಮತ್ತು ದಾಲಿಯಾ ಇವರುಗಳ ಮಿಲನದ ಈ ಮನೋಹರ ಆಟ ನೋಡಲು ಅವಳಿಗೆ ಮಹದಾನಂದವಾಗುತಿತ್ತು.

ಅವಳ ಎಳೆಯ ಹೃದಯದಲ್ಲೂ ತೃಪ್ತಿಹೊಂದದ ಆಸೆಯೊಂದು ಎಚ್ಚರಗೊಂಡು ಅವಳನ್ನು ಸುಖದುಃಖಗಳಿಂದ ಚಂಚಲಗೊಳಿಸುತಿತ್ತೆಂದು ತೋರುತ್ತೆ. ಕೊನೆಗೆ ಏನಾಯಿತೆಂದರೆ ಯುವಕ ಬರಲು ಸಾವಕಾಶವಾದರೆ ಅಮೀನಾ ಹೇಗೆ ಉತ್ಕಂಠಿತಳಾಗಿರುವಳೋ, ಹಾಗೆಯೇ ಜುಲೇಖಾ ಕೂಡ ಉತ್ಕಂಠಿತೆಯಾಗಿರುತಿದ್ದಳು. ಅವರಿಬ್ಬರೂ ಕಲೆತುದಾದರೆ ಚಿತ್ರಗಾರ ಆಗ ತಾನೆ ಮುಗಿದ ಚಿತ್ರವನ್ನು ದೂರದಲ್ಲಿಟ್ಟು ನೋಡುವಂತೆ ಪ್ರೀತಿಯೊಡನೆ ಹಾಸ್ಯದೊಡನೆ ನೋಡುತ್ತಿರುತ್ತಿದ್ದಳು. ಒಮ್ಮೊಮ್ಮೆ ಬಾಯಿಮಾತಿನಲ್ಲಿ ಜಗಳವನ್ನೂ ಮಾಡುವಳು. ನೆಪಮಾತ್ರಕ್ಕೆ ಗದರಿಸುವಳು. ಅಮೀನಳನ್ನು ಕೋಣೆಯಲ್ಲಿ ಕೂಡಿಟ್ಟು, ಯುವಕನನ್ನು ಕಾಣಬೇಕೆಂಬ ಅವಳ ಬಯಕೆಗೆ ಅಡ್ಡಿ ಹೂಡುತಿದ್ದಳು.

ಚಕ್ರವರ್ತಿ ಮತ್ತು ಅರಣ್ಯ ಇವುಗಳ ನಡುವೆ ಒಂದು ಸಾದೃಶ್ಯತೆ ಇದೆ. ಇಬ್ಬರೂ ಸ್ವತಂತ್ರರು. ಇಬ್ಬರೂ ತಮ್ಮ ರಾಜ್ಯದ ಏಕಾಧಿಪತಿಗಳು. ಇಬ್ಬರಿಗೂ ಯಾರೊಬ್ಬರ ನಿಯಮವನ್ನೂ ಅಂಗೀಕರಿಸಿ ನಡೆಯಬೇಕಾದುದಿಲ್ಲ. ಇಬ್ಬರಲ್ಲೂ ಒಂದು ಸ್ವಾಭಾವಿಕವಾದ ದೊಡ್ಡಸ್ತಿಕೆ ಮತ್ತು ಸರಳತೆ ಇರುವುದು. ಮಧ್ಯಸ್ಥಿತಿಯಲ್ಲಿರುವವರು ಹಗಲು ರಾತ್ರಿ ಸಮಾಜದ ಕಟ್ಟಳೆಯನ್ನು ಅಕ್ಷರಶಃ ಪಾಲಿಸುತ್ತ ಬಾಳುವೆ ನಡೆಸುವರಲ್ಲ. ಅವರುಗಳೇ ಸ್ವಲ್ಪ ಸ್ವತಂತ್ರ ಪ್ರಕೃತಿಯುಳ್ಳವರಾಗಿರುವರು. ಅವರುಗಳೇ ದೊಡ್ಡವರ ಬಳಿ ದಾಸರಾಗಿಯೂ, ಸಣ್ಣವರಲ್ಲಿ ಒಡೆಯರಾಗಿಯೂ, ಸ್ಥಾನ ತಪ್ಪಿದೆಡೆಯಲ್ಲಿ ಮುಂದುಗಾಣದವರಾಗಿಯೂ ಆಗಬಿಡುವರು. ಅನಾಗರಿಕ ದಾಲಿಯಾ ಪ್ರಕೃತಿ ಸಮ್ರಾಜ್ಞಿಯ ಕಟ್ಟಿಗೆ ಸಿಲುಕದ ಮಗು. ಷಾಹಜಾದಿಯರ ಇದಿರಿನಲ್ಲಿ ಯಾವ ಬಗೆಯ ಸಂಕೋಚವೂ ಇರಲಿಲ್ಲ. ಷಾಹಜಾದಿಯರೂ ಅವನನ್ನು ತಮಗೆ ಸಮಾನನಾಗಿ ಕಾಣುತಿದ್ದರು. ಹಾಸ್ಯಪ್ರಿಯ, ಸರಳಸ್ವಭಾವದವ, ಕೌತುಕಪ್ರಿಯ, ಎಲ್ಲ ಪರಿಸ್ಥಿತಿಯಲ್ಲೂ ಭೀತಿಯಿಲ್ಲದವ, ಸಂಕೋಚಗೊಳ್ಳದವ, ಅವನ ನಡತೆಯಲ್ಲಿ ದಾರಿದ್ರ್ಯದ ಲಕ್ಷಣವೇ ಕಾಣುತಿರಲಿಲ್ಲ.

ಆದರೆ ಈ ಎಲ್ಲ ಆಟಗಳ ನಡುವೆಯೂ ಒಮ್ಮೊಮ್ಮೆ ಜುಲೇಖಳ ಹೃದಯ ವ್ಯಥೆಪಡುತ್ತಿತ್ತು. ಚಕ್ರವರ್ತಿಯ ಮಗಳ ಬಾಳುವೆಯ ಪರಿಣಾಮ ಇದೆಯೇ ! ಎಂದು ಚಿಂತಿಸುತ್ತಿದ್ದಳು.

ಒಂದು ದಿನ ಬೆಳಗ್ಗೆ ದಾಲಿಯಾ ಬಂದೊಡನೆ ಜುಲೇಖೆ ಅವನ ಕೈ ಹಿಡಿದುಕೊಂಡು "ದಾಲಿಯಾ, ಇಲ್ಲಿಯ ರಾಜನನ್ನು ತೋರಿಸಬಲ್ಲೆಯೇನು ?" ಎಂದು ಕೇಳಿದಳು.

"ಬಲ್ಲೆ, ಏಕೆ ಹೇಳು ಮತ್ತೆ."

"ನನ್ನಲ್ಲಿ ಒಂದು ಚೂರಿ ಇದೆ. ಅದನ್ನು ಅವನ ಎದೆಯಲ್ಲಿ ನಾಟ ಬಯಸುವೆ."

ಮೊದಲು ದಾಲಿಯಾ ಆಶ್ಚರ್ಯದಲ್ಲಿ ಮುಳುಗಿದ. ಅನಂತರ ಜುಲೇಖಳ ಹಿಂಸಾಸಕ್ತಿಯಿಂದ ಕೂಡಿದ ಮುಖ ನೋಡುತ್ತ, ಇಂತಹ ತಮಾಷೆಯ ಸುದ್ದಿ ಎಂದೂ ಕೇಳದಂತೆ ಅವನ ಮುಖದಲ್ಲಿ ನಗು ತುಂಬಿತು. ರಾಜಪುತ್ರಿಗೆ ತಕ್ಕ ಹಾಸ್ಯವೆಂದರೆ ಇದಕ್ಕೇ ಹೇಳಬೇಕು. ಯಾವ ಮಾತುಕತೆಯೂ ಇಲ್ಲ. ಮೊದಲ ಪರಿಚಯದಲ್ಲೇ ಚೂರಿಯೊಂದರ ಅರ್ಧ ಭಾಗವನ್ನು ರಾಜನ ಎದೆಯಲ್ಲಿ ನಾಟಬಿಟ್ಟರೆ, ಈ ಬಗೆಯ ಅಂತರಂಗ ವ್ಯವಹಾರದಿಂದ ರಾಜ ಹೇಗೆ ಮೂಕನಾಗಿ ಹೋದಾನು. ಈ ನೋಟ ಕ್ರಮೇಣ ಅವನ ಮನದಲ್ಲಿ ಮೂಡಿ, ಅವನ ನಿಶ್ಶಬ್ದ ಹಾಸ್ಯದ ನಗು ಮತ್ತೆ ಮತ್ತೆ ಉಚ್ಚಹಾಸ್ಯದಲ್ಲಿ ಮಾರ್ಪಡ ತೊಡಗಿತ್ತು.

೫

ಅದರ ಮರುದಿನವೇ "ಅರಕಾನದ ಹೊಸ ರಾಜ ಬೆಸ್ತರ ಗುಡಿಸಲಲ್ಲಿ ಸೋದರಿಯರ ಸುಳಿವು ಅರಿತಿರುವನು. ಗುಟ್ಟಾಗಿ ಅಮೀನಳನ್ನು ಕಂಡು ಅತ್ಯಂತ ಮುಗ್ಧನಾಗಿರುವನು. ಶೀಘ್ರದಲ್ಲೇ ಅವಳನ್ನು ಮದುವೆಮಾಡಿಕೊಳ್ಳಲು ಅರಮನೆಗೆ ಕರೆತರುವನು. ಸೇಡು ತೀರಿಸಿಕೊಳ್ಳಲು ಇಂತಹ ಅನುಕೂಲ ಸಂದರ್ಭ ಮತ್ತೆ ಎಂದೂ ಸಿಕ್ಕದು" ಎಂದು ರಹಮತ್ ಷೇಖ್ ಗುಟ್ಟಾಗಿ ಕಾಗದ ಬರೆದಿದ್ದನು.

ಆಗ ಜುಲೇಖೆ ಅವಿನಾನಳ ಕೈಯನ್ನು ಬಲವಾಗಿ ಹಿಡಿದುಕೊಂಡು "ಈಶ್ವರನ ಇಚ್ಛೆ ಸ್ಪಷ್ಟವಾಗಿ ಕಾಣುತಿದೆ. ಅವಿನಾನಾ, ನಿನ್ನ ಜೀವನದ ಕರ್ತವ್ಯ ಪಾಲಿಸುವ ಕಾಲ ಒದಗಿದೆ. ಈಗ ಇನ್ನು ಆಟ ಚೆನ್ನಾಗಿರದು" ಎಂದಳು.

ದಾಲಿಯಾ ಅಲ್ಲಿದ್ದನು. ಅವಿನಾನಾ ಅವನ ಮುಖ ನೋಡಿದಳು. ಅವನು ಕೌತುಕದೃಷ್ಟಿಯಿಂದ ನಗುತಿದ್ದುದನ್ನು ಕಂಡಳು.

ಅವಿನಾನೆ ಅವನ ನಗು ಕಂಡು ಬಹಳ ನೊಂದವಳಾಗಿ "ಬಲ್ಲೆಯೋ ದಾಲಿಯಾ, ನಾನು ರಾಜರ ಹೆಂಡತಿಯಾಗುವೆನು" ಎಂದಳು.

ದಾಲಿಯಾ ನಕ್ಕು "ಅದಂತೂ ಹೆಚ್ಚುಕಾಲದವರೆಗಲ್ಲವಲ್ಲ" ಎಂದನು.

ಅವಿನಾನಾ ಪೀಡಿತ ವಿಸ್ಮಿತ ಚಿತ್ತದೊಡನೆ ಮನಸ್ಸಿನಲ್ಲೇ—"ನಿಜವಾಗಿಯೂ ಇವನೊಂದು ಕಾಡುಪ್ರಾಣಿ. ಇವನೊಡನೆ ಮನುಷ್ಯರಂತೆ ನಡೆದುಕೊಳ್ಳುವುದು ನಮ್ಮದೇ ಹುಚ್ಚಾಟ" ಎಂದು ಅಂದುಕೊಂಡಳು.

ಅವಿನಾನೆ ದಾಲಿಯಾನನ್ನು ಎಚ್ಚರಗೊಳಿಸಬೇಕೆಂದೇ "ರಾಜನನ್ನು ಕೊಂದು ನಾನು ಹಿಂದಿರುಗಿ ಬರಲು ಸಾಧ್ಯವೇನು?" ಎಂದಳು.

ಮಾತು ನ್ಯಾಯಸಂಗತವಾದುದೆಂದು ತಿಳಿದೇ ದಾಲಿಯಾ "ಹಿಂದಿರುಗುವುದು ಕಠಿಣವೇ" ಎಂದನು

ಅವಿನಾನಳ ಸಂಪೂರ್ಣ ಅಂತರಾತ್ಮ ಒಮ್ಮೆಗೆ ಕುಗ್ಗಿಹೋಯಿತು.

ಜುಲೇಖಳ ಕಡೆ ತಿರುಗಿ ನಿಟ್ಟುಸಿರುಬಿಟ್ಟು "ಅಕ್ಕಾ, ನಾನು ಸಿದ್ಧಳಾಗಿರುವೆ" ಎಂದಳು.

ದಾಲಿಯಾನ ಕಡೆ ತಿರುಗಿ ನೊಂದ ಹೃದಯದೊಡನೆ ಹಾಸ್ಯದ ನಟನೆ ಮಾಡಿ "ರಾಣಿ ಆದೊಡನೆ ನಾನು ಮೊದಲು ರಾಜನ ವಿರುದ್ಧವಾಗಿ ವಿದ್ರೋಹ ನಡೆಸಿದ ಅಪರಾಧಕ್ಕೆ ನಿನ್ನನ್ನು ಶಿಕ್ಷಿಸಿ ಅನಂತರವೇ ಬೇರೆ ಕೆಲಸ ಮಾಡುವೆ" ಎಂದಳು.

ಇವಳ ಮಾತು ಕೇಳಿ ದಾಲಿಯಾ "ಇವಳ ಮಾತು ಕಾರ್ಯರೂಪದಲ್ಲಿ ಮಾರ್ಪಟ್ಟದಾದರೆ ಬಹಳ ಆನಂದದ ವಿಷಯ ಆದೀತು" ಎಂದು ಅನ್ನುವಂತೆ ಬಹಳವಾಗಿ ನಕ್ಕನು.

೬

ಕುದುರೆ ಸವಾರರು, ಕಾಲಾಳುಗಳು, ಧ್ವಜಗಳು, ಆನೆ, ವಾದ್ಯ ಮತ್ತು ದೀಪಗಳಿಂದ ಬಿಸ್ತರವನ ಮನೆ ಬಾಗಿಲು ಮುರಿದು ನೆಲಸಮವಾಗುವಂತೆ ಕಾಣುತ್ತಿತ್ತು. ಅರಮನೆಯಿಂದ ಎರಡು ಬಂಗಾರದ ಮೇಣೆಗಳು ಬಂದಿದ್ದವು.

ಅಮಿನಾ ಜುಲೇಖಳ ಕೈಯಿಂದ ಚೂರಿ ತೆಗೆದುಕೊಂಡಳು. ಅದರ ಹಿಡಿಯಲ್ಲಿ ಮಾಡಿದ್ದ ಆನೆಯ ದಂತದ ಕೆತ್ತನೆಯ ಕೆಲಸವನ್ನು ಬಹಳ ಹೊತ್ತು ನೋಡುತಿದ್ದಳು. ಅನಂತರ ಒಟ್ಟೆ ಎತ್ತಿ ತನ್ನ ಎದೆಯ ಮೇಲೆ ಒಮ್ಮೆ ಅದರ ಹರಿತವನ್ನು ಪರೀಕ್ಷಿಸಿ ನೋಡಿದಳು. ಜೀವನ ಮುಕುಲ ವೃಂತದ ಬಳಿ ಒಮ್ಮೆ ಚೂರಿಯನ್ನು ತಗುಲಿಸಿದಳು. ಪುನಃ ಅದನ್ನು ಒರೆಯೊಳಗೆ ಇಟ್ಟು ಉಡುಪಿನಲ್ಲಿ ಮುಚ್ಚಿಟ್ಟುಕೊಂಡಳು.

ಈ ಮರಣ ಯಾತ್ರೆಗೆ ಮುಂಚೆ ಒಮ್ಮೆ ದಾಲಿಯಾನನ್ನು ನೋಡಬೇಕೆಂದು ಅವಳಿಗೆ ಬಹಳ ಆಸೆಯಿತ್ತು. ಆದರೆ ಹಿಂದಿನ ದಿನದಿಂದ ಅವನು ಕಾಣಿಸಲಿಲ್ಲ. ದಾಲಿಯಾ ನಗುತಿದ್ದನಲ್ಲ ಆ ನಗುವಿನಲ್ಲಿ ಅದೆಷ್ಟು ಅಭಿಮಾನದ ಕಿಚ್ಚು ಅಡಗಿತ್ತು.

ಮೇಣೆಯಲ್ಲಿ ಹತ್ತುವ ಮುಂಚೆ ಅಮಿನಾ ತನ್ನ ಬಾಲ್ಯ ಕಾಲದ ಆಶ್ರಯವನ್ನು ಕಣ್ಣೀರ ನಡುವಣಿಂದ ಒಮ್ಮೆ ನೋಡಿದಳು. ಬಿಸ್ತರವನ ಕೈ ಹಿಡಿದುಕೊಂಡು ನೀರು ತುಂಬಿದ ಕಣ್ಣುಗಳೊಡನೆ ನಡುಗುವ ದನಿಯಲ್ಲಿ, "ಅಜ್ಜಾ, ಹೋಗಿಬರುವೆ, ಇನ್ನೀ ಹೊರಟುಹೋದಮೇಲೆ ನಿನ್ನ ಮನೆಗೆಲಸ ಮಾಡುವವರ್‍ಯಾರು" ಎಂದಳು.

ಮುದುಕ ಎಳೆಯ ಮಗುವಿನಂತೆ ಅಳತೊಡಗಿದ.

ಅಮಿನಾ—"ಅಜ್ಜಯ್ಯಾ, ದಾಲಿಯಾ ಬಂದನಾದರೆ ಅವನಿಗೆ ಈ ಉಂಗುರ ಕೊಡು. ಅಿನ್ನೀ ಕೊಟ್ಟುಹೋದಳೆಂದು ಹೇಳು" ಎಂದಳು,

ಇಷ್ಟು ಹೇಳಿ ಅವಸರದೊಡನೆ ಮೇಣೆಯಲ್ಲಿ ಕುಳಿತಳು. ಮಹಾ ಕೋಲಾಹಲದೊಡನೆ ಮೇಣೆ ಹೊರಟುಹೋಯಿತು. ಅಮಿನಾಳ ಗುಡಿಸಲು, ನದೀತೀರ ಹೂವಿನ ಗಿಡದ ಅಡಿ ಎಲ್ಲ ಸ್ತಬ್ಧವಾಗಿ ಜನಶೂನ್ಯ ಅಂಧಕಾರದಲ್ಲಿ ಅಡಗಿತು.

ವೇಳೆಗೆ ಸರಿಯಾಗಿ ಮೇಣೆಗಳೆರಡು ಹೆಬ್ಬಾಗಿಲನ್ನು ದಾಟಿ ಅಂತಃಪುರವನ್ನು ಹೊಕ್ಕವು. ಸೋದರಿಯರಿಬ್ಬರೂ ಮೇಣೆ ಬಿಟ್ಟು ಹೊರಗೆ ಬಂದರು.

ಅಮೀನಾಳ ಮುಖದಲ್ಲಿ ನಗು ಇರಲಿಲ್ಲ. ಕಣ್ಣಿನಲ್ಲೂ ಕಣ್ಣೀರ ಸುಳಿವಿರಲಿಲ್ಲ. ಜುಲೇಖಳ ಮುಖ ಬಣ್ಣಗೆಟ್ಟಿತ್ತು. ಕರ್ತವ್ಯ ದೂರವಾಗಿದ್ದವರೆಗೆ ಅವಳ ಉತ್ಸಾಹದಲ್ಲಿ ತೀವ್ರತೆಯಿತ್ತು. ಈಗ ಅವಳು ನಡುಗುವ ಎದೆ ಮತ್ತು ವ್ಯಾಕುಲಮನದೊಡನೆ ಅಮೀನಾಳನ್ನು ಆಲಿಂಗಿಸಿಕೊಂಡಳು. ನವಪ್ರೇಮದ ತೊಟ್ಟಿನಿಂದ ಬೇರ್ಪಡಿಸಿ ಈ ಅರಳಲಿರುವ ಪುಷ್ಪವನ್ನು ಯಾವ ರಕ್ತದ ಹೊಳೆಯಲ್ಲಿ ತೇಲಿಸಲು ಹೊರಟಿರುವೆನು ಎಂದು ಮನಸ್ಸಿನಲ್ಲೇ ಅಂದುಕೊಂಡಳು.

ಆದರೆ ಆಗ ಅವಳಿಗೆ ಯೋಚಿಸಲು ಎಡೆಯಿರಲಿಲ್ಲ. ಪರಿಚಾರಿಕೆಯರು ದಾರಿ ತೋರುತ್ತಿರಲು, ಲಕ್ಷಾಂತರ ದೀಪಗಳ ಎವೆಯಿಕ್ಕದ ದೃಷ್ಟಿಯ ಮಧ್ಯದಿಂದ ಅಕ್ಕತಂಗಿಯರು ಕನಸಿನಲ್ಲಿರುವವರಂತೆ ನಡೆಯತೊಡಗಿದರು. ಕೊನೆಗೆ ಒಳಗೆಯ ಮನೆಯ ಬಾಗಿಲ ಬಳಿ ಕ್ಷಣ ಹೊತ್ತು ನಿಂತು ಅಮೀನಾ ಜುಲೇಖಳೊಡನೆ "ಅಕ್ಕಾ," ಎಂದಳು.

ಜುಲೇಖೆ ಅಮೀನಾಳನ್ನು ಗಾಢಾಲಿಂಗನದಲ್ಲಿ ಬಂಧಿಸಿ ಮುಂದಿಟ್ಟಳು.

ಇಬ್ಬರೂ ಮೆಲ್ಲಮೆಲ್ಲನೆ ಕೋಣೆಯನ್ನು ಹೊಕ್ಕರು.

ರಾಜನ ಉಡುಪು ತೊಟ್ಟು ಕೋಣೆಯ ನಡುವೆ ಹಂಸತೂಲಿಕಾ ತಲ್ಪದ ಮೇಲೆ ರಾಜ ಕುಳಿತಿದ್ದ. ಅಮೀನಾ ನಾಚಿಕೆಯೊಡನೆ ಕೋಣೆಯ ಬಾಗಿಲ ಬಳಿ ನಿಂತಿದ್ದಳು.

ಜುಲೇಖೆ ಮುಂದುವರಿದು ರಾಜನ ಹತ್ತಿರ ಹೋಗಿ ನೋಡಿದಳು. ರಾಜ ನಿಶ್ಶಬ್ದವಾಗಿ ಕೌತುಕದೊಡನೆ ನಗುತಿದ್ದನು.

ಜುಲೇಖೆ "ದಾಲಿಯಾ" ಎಂದು ಕೂಗಿದಳು. ಅಮೀನಾ ಮೂರ್ಛೆಗೊಂಡು ಕೆಳಗೆ ಬಿದ್ದಳು.

ದಾಲಿಯಾ ಎದ್ದು ಅವಳನ್ನು ಬಾಣ ತಗುಲಿ ನೊಂದ ಹಕ್ಕಿಯಂತೆ ಎತ್ತಿಕೊಂಡು ಹಾಸಿಗೆಯಮೇಲೆ ಮಲಗಿಸಿದನು. ಅಮೀನಾ ಎಚ್ಚರಗೊಂಡು ಎದೆಯ

ಹತ್ತಿರದಿಂದ ಚೂರಿ ಹೊರಗೆ ತೆಗೆದು ಅಕ್ಕನ ಮುಖ ನೋಡಿದಳು. ಅಕ್ಕ ದಾಲಿಯಾನ ಮುಖ ನೋಡಿದಳು. ದಾಲಿಯಾ ತೆಪ್ಪನೆ ನಗು ಮುಖದೊಡನೆ ಇಬ್ಬರನ್ನೂ ದೃಷ್ಟಿಸಿ ನೋಡುತಿದ್ದನು. ಚೂರಿಯೂ ತನ್ನ ಒರೆಯೊಳಗಿನಿಂದ ಸ್ವಲ್ಪವಾಗಿ ಮುಖ ಹೊರಗೆ ತೆಗೆದು ಈ ದೃಶ್ಯ ನೋಡಿ ಥಳಥಳನೆ ನಗುತಿತ್ತು. (ಕ್ರಿ.ಶ. ೮೯೨)

# ಮೋಡ ಮತ್ತು ಬಿಸಿಲು

## ಪ್ರಥಮ ಪರಿಚ್ಛೇದ

ಹಿಂದಿನ ದಿನ ಮಳೆಯಾಗಿತ್ತು. ಇಂದು ಮಳೆ ಬಿಟ್ಟು ಪ್ರಾತಃಕಾಲದಲ್ಲಿ ಹೂಬಿಸಿಲು ಮತ್ತು ತುಣುಕು ಮೋಡ ಕಲೆತು ಹಾಲು ತುಂಬಿದ ತೆನೆಯ ಕಾರು ಭತ್ತದ ಗದ್ದೆಯ ಮೇಲೆ ಸರದಿಯ ಮೇರೆ ತಮ್ಮ ಉದ್ದನಾದ ಕುಂಚವನ್ನು ಎಳೆದು ಮುಂದುವರಿಯುತ್ತಿದ್ದವು. ವಿಸ್ತಾರವಾದ ಶ್ಯಾಮವರ್ಣದ ಚಿತ್ರಪಟ ಒಂದು ಘಳಿಗೆ ಬಿಸಿಲ ಪ್ರಕಾಶದಲ್ಲಿ ಉಜ್ವಲವಾಗಿ ಹೊಳೆಯುತ್ತಿದ್ದು ಮರುಕ್ಷಣದಲ್ಲಿ ನೆರಳಿನ ಕವಿಯುವಿಕೆಯಿಂದ ಗಾಢ ಸ್ನಿಗ್ಧತೆಯನ್ನು ಧರಿಸುತ್ತಿತ್ತು.

ಆಕಾಶ ರಂಗಸ್ಥಳದಲ್ಲಿ ಮೋಡ ಮತ್ತು ಬಿಸಿಲು ಈ ಎರಡು ಪಾತ್ರಗಳು ಮಾತ್ರ ತಮ್ಮ ತಮ್ಮ ಅಂಶವನ್ನು ಅಭಿನಯಿಸುತ್ತಿರುವಾಗ ಕೆಳಗೆ ಪ್ರಪಂಚದ ರಂಗಮಂಟಪದಲ್ಲಿ ಎಷ್ಟು ಸ್ಥಳಗಳಲ್ಲಿ ಅವೆಷ್ಟು ಅಭಿನಯ ನಡೆಯುತ್ತಿತ್ತೋ ಅವನ್ನು ಲೆಕ್ಕಿಸಲು ಸಾಧ್ಯವಿಲ್ಲ.

ನಾವು ಯಾವೆಡೆಯ ಜೀವನ ನಾಟಕದ ಪರದೆ ಎತ್ತಿರುವೆವೋ ಅಲ್ಲಿ ಹಳ್ಳಿಯ ಹಾದಿಯ ಅರುಗಿನಲ್ಲಿ ಒಂದು ಮನೆ ಕಾಣುವುದು. ಮುಮ್ಮನೆಯ ಸ್ವಲ್ಪ ಭಾಗವಷ್ಟೇ ತಾರಸಿಯ ಕಟ್ಟಡ. ಇಕ್ಕೆಲದಲ್ಲೂ ಮುರಿದು ಬೀಳುತ್ತಿರುವ ಇಟ್ಟಿಗೆಗಳ ಪೌಳಿಗೋಡೆ ಮತ್ತು ನಾಲ್ಕಾರು ಮಣ್ಣಿನ ಮನೆಗಳು ಅಂಟಿದಂತಿವೆ. ಹಾದಿಯಿಂದ ಕಿಟಕಿಯ ಮೂಲಕ ಹಲಗೆಯ ಮಂಚವೊಂದರ ಮೇಲೆ ಯುವಕನೊಬ್ಬನು ಬರಿ ಮೈಯಲ್ಲಿ ಕುಳಿತು ಗಳಿಗೆಗೊಮ್ಮೆ ಓಲೆಯ ಬೀಸಣಿಗೆಯಿಂದ ಸೆಕೆ ಮತ್ತು ನೊಣ ಇವೆರಡನ್ನೂ ದೂರ ಓಡಿಸಲು ಯತ್ನಿಸುತ್ತಿದ್ದನು. ಎಡಗೈಯಲ್ಲಿ ಪುಸ್ತಕ ಹಿಡಿದುಕೊಂಡು ಪಾಠ ಕಲಿಯುವುದರಲ್ಲಿ ಆಸಕ್ತನಾಗಿದ್ದನು.

ಹೊರಗೆ ಹಾದಿಯ ಅರಗಿನಲ್ಲಿ ಹೊಲೆಮಗ್ಗದ ಬಟ್ಟೆಯೊಂದನ್ನು ಉಟ್ಟು ಹುಡುಗಿಯೊಬ್ಬಳು ಸೆರಗಿನ ತುಂಬ ನೇರಳೆಯ ಹಣ್ಣು ಕಟ್ಟಿಕೊಂಡು ಒಂದೊಂದಾಗಿ ಮುಗಿಸುತ್ತ ಮೇಲೆ ಹೇಳಿದ ಕಿಟಕಿಯ ಇದಿರಿನಲ್ಲಿ ಅಡಿಗಡಿಗೆ

ಓಡಾಡುತಿದ್ದಳು. ಒಳಗೆ ಹಲಗೆಯ ಮಂಚದಮೇಲೆ ಕುಳಿತು ಪುಸ್ತಕ ಓದು ತಿದ್ದ ಹುಡುಗನಿಗೆ ಈಕೆಗೆ ಹತ್ತಿರದ ಗೆಳೆತನವಿದ್ದಿತೆಂದೂ, ಯಾವ ವಿಧದಲ್ಲಾದರೂ ಅವನ ಗಮನವನ್ನು ಸೆಳೆದು ಸದ್ದಿಲ್ಲದೆ ತಿರಸ್ಕಾರ ಭಾವನೆಯಿಂದ 'ಈಗ ನೇರಳೆ ಹಣ್ಣು ತಿನ್ನುತಿರುವೆನು, ನಿನ್ನನ್ನು ನಾನು ಲಕ್ಷಿಸೆನು' ಎಂದು ಅವನಿಗೆ ತಿಳಿಸಬಯಸುವಂತೆಯೂ ಅವಳ ಮುಖಭಾವದಿಂದ ಅರಿವಾಗುತಿತ್ತು.

ದುರದೃಷ್ಟವಶಾತ್ ಕೊಠಡಿಯಲ್ಲಿ ಓದುವುದರಲ್ಲಿ ಆಸಕ್ತನಾಗಿದ್ದ ವ್ಯಕ್ತಿಯ ದೃಷ್ಟಿ ಮಂದವಾಗಿತ್ತು. ದೂರದಿಂದ ಬಾಲಿಕೆಯ ನಿಶ್ಯಬ್ದ ತಿರಸ್ಕಾರ ಅವನನ್ನು ನೋಕಲೇ ಇಲ್ಲ. ಹಲವು ಬಾರಿ ಅತ್ತಿತ್ತ ನಡೆದಾದನಂತರ ಅದನ್ನರಿತು ನಿಶ್ಯಬ್ದ ತಿರಸ್ಕಾರದ ಬದಲಾಗಿ ನೇರಳೆಹಣ್ಣಿನ ಬೀಜವನ್ನು ಉಪಯೋಗಿಸತೊಡಗಿದಳು. ಕುರುಡನ ಹತ್ತಿರ ಬಿಗುಮಾನದ ಗೌರವ ಉಳಿಸುವುದು ಬಹು ಕಷ್ಟವಾದ ಸಂಗತಿ.

ಘಳಿಗೆಗೊಮ್ಮೆ ನೇರಳೆಯ ಬೀಜ ದೈವವಶಾತ್ ಹಲಗೆಯ ಕದದ ಮೇಲೆ ತಗುಲಿ ಠಕ್ ಠಕ್ ಎಂದು ಶಬ್ದಗಲು ಓದಿನಲ್ಲಿ ಮುಳುಗಿದ್ದ ಗಂಡಸು ತಲೆಯೆತ್ತಿ ದಿಟ್ಟಿಸಿ ನೋಡಿದನು. ಮಾಯಗಾರ್ತಿ ಹುಡುಗಿ ಅದನ್ನರಿತವಳಾಗಿ ಇಮ್ಮಡಿಯಾದ ಅಲಕ್ಷ್ಯಭಾವದಿಂದ ಉಡಿಯಲ್ಲಿದ್ದ ನೇರಳೆ ಹಣ್ಣುಗಳಲ್ಲಿ ಕಚ್ಚಿ ತಿನ್ನಲು ತಕ್ಕುದಾದ ಮಾಗಿದ ಹಣ್ಣುಗಳನ್ನು ಆರಿಸತೊಡಗಿದಳು. ಗಂಡಸು ಹುಬ್ಬು ಗಂಟಿಕ್ಕಿ ಸ್ವಲ್ಪ ಹೆಚ್ಚಿನ ಪ್ರಯತ್ನದೊಡನೆ ದಿಟ್ಟಿಸಿ ನೋಡಿ ಹುಡುಗಿಯನ್ನು ಗುರುತಿಸಿದನು. ಪುಸ್ತಕವನ್ನು ಕೆಳಗಿಟ್ಟು ಕಿಟಕಿಯ ಬಳಿ ಬಂದು ನಿಂತುಕೊಂಡು ನಗುಮುಖದೊಡನೆ—"ಗಿರಿಬಾಲೆ" ಎಂದು ಕರೆದನು.

ಗಿರಿಬಾಲೆ ವಿಚಲಿತಳಾಗದೆ ತನ್ನ ಉಡಿಯಲ್ಲಿದ್ದ ನೇರಳೆಹಣ್ಣುಗಳನ್ನು ಪರೀಕ್ಷಿಸುವ ಕೆಲಸದಲ್ಲಿ ಪೂರ್ತಿ ಮನಗೊಟ್ಟು ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಹೊರಡತೊಡಗಿದಳು.

ಆಗ ಮಂದದೃಷ್ಟಿಯ ಯುವಕ ತಾನು ಅರಿಯದೆ ಮಾಡಿದ ಯಾವುದೋ ತಪ್ಪಿಗಾಗಿ ಶಿಕ್ಷೆಯಾಗುತಿದೆಯೆಂಬುದನ್ನು ಅರಿಯಲು ವಿಳಂಬವಾಗಲಿಲ್ಲ. ವೇಗವಾಗಿ ಹೊರಗೆ ಬಂದು—"ಎಲ್ಲಿ, ಇಂದು ನೇರಳೆಹಣ್ಣು ಕೊಡಲಿಲ್ಲವಲ್ಲ?" ಎಂದನು. ಗಿರಿಬಾಲೆ ಅವನ ಮಾತಿಗೆ ಕಿವಿಗೊಡದೆ ಬಹಳ

ಹುಡುಕಿ ಹಣ್ಣೊಂದನ್ನು ಆರಿಸಿ ತೆಗೆದು ಅತ್ಯಂತ ನಿಶ್ಚಿಂತ ಮನಸ್ಸಿನಿಂದ ತಿನ್ನಲು ಆರಂಭಿಸಿದಳು.

ಈ ನೇರಳೆ ಹಣ್ಣುಗಳು ಗಿರಿಬಾಲೆಯ ಮನೆಯ ತೋಟದ ಮರದ್ದು. ಪ್ರತಿನಿತ್ಯ ಆ ಯುವಕನಿಗೆ ಪಾಲು ಸಿಕ್ಕುತಿತ್ತು. ಏಕೋ ಏನೋ, ಇಂದು ಆ ಸಂಗತಿ ಗಿರಿಬಾಲೆಗೆ ಏನೇನೂ ನೆನಪಾಗಲಿಲ್ಲ. ಅವಳ ನಡವಳಿಕೆಯಿಂದ ಅವಳು ಅವನ್ನು ತನ್ನ ಉಪಯೋಗಕ್ಕಾಗಿಯೇ ತಂದಿರುವಂತೆ ಕಾಣುತಿತ್ತು. ಆದರೆ ತಮ್ಮ ತೋಟದಿಂದ ಹಣ್ಣುಗಳನ್ನು ಕೊಯ್ದು ತಂದು ಕಂಡವರ ಮನೆಯ ಬಾಗಿಲಲ್ಲಿ ನಿಂತು ಆಡಂಬರದೊಡನೆ ತಿನ್ನುವುದರ ಅರ್ಥವೇನೋ ಅರಿವಾಗದು. ಆಗ ಆ ಗಂಡಸು ಹತ್ತಿರ ಹೋಗಿ ಹುಡುಗಿಯ ಕೈ ಹಿಡಿದು ಕೊಂಡನು. ಗಿರಿಬಾಲೆ ಮೊದಲು ಕುಲುಕುತ್ತ ಬಳುಕುತ್ತ ಕೈ ಬಿಡಿಸಿ ಕೊಂಡು ಹೋಗಲು ಪ್ರಯತ್ನಿಸಿದಳು. ಅನಂತರ ಇದ್ದಕ್ಕಿದ್ದಂತೆ ಕಣ್ಣೀರ ಕಾಲುವೆ ಹರಿಸಿ ಅಳತೊಡಗಿದಳು. ಉಡಿಯ ಹಣ್ಣುಗಳನ್ನು ಕೆಳಗೆ ಚೆಲ್ಲಿ ಓಡಿಹೋದಳು.

ಮುಂಜಾನೆಯ ಚಂಚಲವಾದ ಹೂಬಿಸಿಲು ಮತ್ತು ಮೋಡ ಬೆಳಗಿನ ಶಾಂತ ಮತ್ತು ದಣಿವಿನ ಭಾವನೆ ತಳೆದವು. ಒಗ್ಗೂಡಿದ ಬಿಳಿಯ ಮೋಡ ಆಕಾಶದಲ್ಲಿ ಗೋಪುರದಂತೆ ಆಕಾರ ತಾಳಿದೆ ಅಪರಾಹ್ಣದ ಬಿಸಿಲಿಗೆ ಮರದ ಎಲೆಗಳು, ಕೊಳದ ನೀರು ಮತ್ತು ಪ್ರಕೃತಿಯ ಅಂಗಾಂಗಗಳು ಥಳಥಳಿಸು ತಿದ್ದುವು. ಪುನಃ ಆ ಹೆಣ್ಣು ಆ ಸಲಾಕಿಯ ಕಿಟಕಿಯ ಬಳಿ ಕಾಣಬಂದಳು. ಒಳಗೆ ಅದೇ ಯುವಕ ಕುಳಿತಿದ್ದನು. ಕಾಣುವ ಮಾರ್ಪಾಡೆಂದರೆ ಈಗ ಹುಡುಗಿಯ ಉಡಿಯಲ್ಲಿ ನೇರಳೆ ಹಣ್ಣಿಲ್ಲ. ಯುವಕನ ಕೈಯಲ್ಲಿ ಪುಸ್ತಕವೂ ಇಲ್ಲ. ಇದಕ್ಕಿಂತ ಹೆಚ್ಚಿನ ಮಾರ್ಪಾಡೂ ಕಾಣುತಿತ್ತು.

ಈ ವೇಳೆಯಲ್ಲಿ ಹುಡುಗಿ ಯಾವ ಹೆಚ್ಚಿನ ಆವಶ್ಯಕತೆಗಾಗಿ ಆ ಎಡೆಗೆ ಬಂದು ಅತ್ತಿತ್ತ ಓಡಾಡುತ್ತಿದ್ದಳೆಂಬುದನ್ನು ಹೇಳುವುದು ಕಷ್ಟ. ಆವಶ್ಯಕತೆ ಯಾವುದೇ ಇರಲಿ ಕೊಠಡಿಯೊಳಗಿನ ಗಂಡಸಿನೊಡನೆ ಮಾತನಾಡಬೇಕಾದ ಆವಶ್ಯಕತೆಯಿದೆಯೆಂಬುದು ಮಾತ್ರ ಯಾವ ಬಗೆಯಲ್ಲೂ ಹುಡುಗಿಯ ನಡ ವಳಿಕೆಯಿಂದ ಕಂಡುಬರಲಿಲ್ಲ. ಮೇಲಾಗಿ ಆಕೆ ತಾನು ಬೆಳಗ್ಗೆ ಬಿಸುಟು

ಹೋಗಿದ್ದ ನೇರಳೆಹಣ್ಣುಗಳು ಈಗ ಮೊಳಕೆ ಬಂದಿವೆಯೋ ಇಲ್ಲವೋ ಎಂಬುದನ್ನು ನೋಡಲು ಬಂದಂತೆ ತೋರುತಿತ್ತು.

ಆದರೆ ಮೊಳಕೆ ಬಾರದಿರಲು ಇದ್ದ ಹಲವು ಕಾರಣಗಳ ನಡುವೆ ದೊಡ್ಡ ಕಾರಣವೊಂದಿದೆ. ಹಣ್ಣುಗಳು ಈಗ ಯುವಕನ ಇದಿರಿನಲ್ಲಿ ಹಲಗೆಯ ಮಂಚದ ಮೇಲೆ ರಾಶಿಯಾಗಿದ್ದುವು ಆತ ಅವುಗಳಲ್ಲಿ ಒಳ್ಳೆಯವನ್ನು ಒಂದೊಂದಾಗಿ ಆರಿಸಿ ತೆಗೆದು ತಿನ್ನುತ್ತಿದ್ದನು. ಹುಡುಗಿ ಘಳಿಗೆ ಘಳಿಗೆಗೆ ತಲೆ ತಗ್ಗಿಸಿಕೊಂಡು ಯಾವುದೋ ಒಂದು ಅನಿರ್ದಿಷ್ಟ ಕಾಲ್ಪನಿಕ ವಸ್ತುವನ್ನು ಅರಸುವುದರಲ್ಲಿ ಉದ್ಯುಕ್ತಳಾಗಿರಲು, ಯುವಕ ಒಳಗೊಳಗೆ ನಗುತ್ತ ಅತಿಗಂಭೀರಭಾವದಿಂದ ಒಂದೊಂದು ಹಣ್ಣಾಗಿ ಆರಿಸಿ ತಿನ್ನುತ್ತಿದ್ದನು. ಕೊನೆಗೆ ಒಂದೆರಡು ಬೀಜಗಳು ದೈವಯೋಗದಿಂದ ಹುಡುಗಿಯ ಕಾಲಬಳಿ ಹೆಚ್ಚೇಕೆ ಕಾಲಮೇಲೆಯೇ ಬೀಳಲು, ಹುಡುಗಿ ಆಗ ತನ್ನ ಮುನಿಸಿನ ಮುಯ್ಯಿ ತೀರುತ್ತಿದೆಯೆಂದು ಅರಿತಳು. ಆದರೆ ಇದು ನ್ಯಾಯವೇನು? ಅವಳು ತನ್ನ ಕ್ಷುದ್ರ ಹೃದಯದ ಎಲ್ಲ ಹೆಮ್ಮೆಯನ್ನೂ ವಿಸರ್ಜಿಸಿ ಆತ್ಮಸಮರ್ಪಣೆ ಮಾಡಿಕೊಳ್ಳಲು ಅವಕಾಶ ಹುಡುಕುತ್ತಿರುವಲ್ಲಿ ಅವಳ ಆ ಕಷ್ಟಕರ ಹಾದಿಯಲ್ಲಿ ಅಡ್ಡಿಯೊಡ್ಡುವುದು ಉಚಿತವೇ? ಸೋಲನ್ನೊಪ್ಪಿಕೊಳ್ಳಲು ಬಂದಿರುವ ಸಂಗತಿ ಪ್ರಕಟವಾಗಲು ಹುಡುಗಿಯ ಮುಖ ಕೆಂಪೇರಿ ಅವಳು ಓಡಿಹೋಗುವ ಮಾರ್ಗ ಹುಡುಕತೊಡಗಿದಳು. ಆಗ ಯುವಕ ಹೊರಗೆ ಬಂದು ಅವಳ ಕೈ ಹಿಡಿದುಕೊಂಡನು.

ಬೆಳಗಿನಂತೆಯೇ ಈಗಲೂ ಹುಡುಗಿ ಬಾಗಿ ಬಳುಕಿ ಕೈಬಿಡಿಸಿಕೊಂಡು ಓಡಲು ಬಹಳವಾಗಿ ಪ್ರಯತ್ನಮಾಡಿದಳು—ಆದರೆ ಅಳಲಿಲ್ಲ ಮೇಲಾಗಿ ಕೆಂಪೇರಿದ ಮುಖದೊಡನೆ ಮೈಬಾಗಿಸಿ ಹಿಂಸಿಸುವವನ ಬೆನ್ನಮೇಲೆ ಮುಖ ಮುಚ್ಚಿಕೊಂಡು ಬಲವಾಗಿ ನಗಲು ಆರಂಭಿಸಿದಳು ಕೇವಲ ಹೊರಗಿನ ಆಕರ್ಷಣೆಯಿಂದ ನಿರ್ಬಂಧಿಸಲ್ಪಟ್ಟ ಸೋತ ಸೆರೆಯಾಳಂತೆ ಸಲಾಕೆ ಹಾಕಿದ ಸೆರೆಮನೆಯ ಒಳಗೆ ಹೊಕ್ಕಳು.

ಆಕಾಶದಲ್ಲಿ ಮೋಡ ಮತ್ತು ಬಿಸಿಲಿನ ಆಟ ಹೇಗೆ ಸಾಮಾನ್ಯವೋ, ಹಾಗೆಯೇ ಭೂಮಿಯ ಮೇಲೆ ಎರಡು ಜೀವಗಳ ಆಟವೂ ಸಾಮಾನ್ಯ, ಅದರ ಹಾಗೆಯೇ ಕ್ಷಣಿಕ. ಮೇಲಾಗಿ ಆಕಾಶದಲ್ಲಿ ಮೋಡ ಮತ್ತು ಬಿಸಿಲಿನ ಆಟ

ಸಾಮಾನ್ಯವಾದುದಲ್ಲವಾದರೂ, ಆಟವಲ್ಲವಾದರೂ ಹೇಗೆ ಆಟದಂತೆ ತೋರ್ಪಡುವುದೋ ಹಾಗೆಯೇ ಈ ಇಬ್ಬರು ಖ್ಯಾತಿಹೀನ ಮಾನವರ ಕೆಲಸವಿಲ್ಲದ ಮಳೆಯ ದಿನವೊಂದರ ಕ್ಷುದ್ರ ಇತಿಹಾಸ ಪ್ರಪಂಚದ ನೂರಾರು ಘಟನೆಗಳ ನಡುವೆ ತುಚ್ಛವೆಂದು ತೋರಬಹುದಾದರೂ ಇದು ಹಾಗೆ ತುಚ್ಛವಾದುದಲ್ಲ ಅವಿಚಲಿತ ಗಂಭೀರ ಮುಖಭಾವದೊಡನೆ ಅನಂತ ಕಾಲದಿಂದ ಯುಗದೊಡನೆ ಯುಗಾಂತರವನ್ನು ಕೂಡಿಸುತ್ತಿರುವ ಮುದುಕ ವಿರಾಟ್ ಅದೃಷ್ಟ ಪುರುಷನೇ ಈ ಹುಡುಗಿಯ ಈ ಬೆಳಗು-ಮಧ್ಯಾಹ್ನದ ತುಚ್ಛ ನಗು-ಅಳುವಿನ ನಡುವೆ ಜೀವಾವಧಿಯ ಸುಖದುಃಖದ ಬೀಜವನ್ನು ಬಿತ್ತುತ್ತಿದ್ದನು. ಆದರೂ ಹುಡುಗಿಯ ಈ ಕಾರಣವಿಲ್ಲದ ಬಿಗುಮಾನ ಅತ್ಯಂತ ಅರ್ಥಹೀನವಾದುದೆಂದು ಕಾಣುತಿತ್ತು. ಕೇವಲ ನೋಡುವವರ ಬಳಿಯಷ್ಟೇ ಅಲ್ಲ. ಈ ಕ್ಷುದ್ರ ನಾಟಕದ ಪ್ರಧಾನ ಪಾತ್ರನಾದ ಆ ಯುವಕನಿಗೂ ಸಹ ಹೀಗೆ ಕಂಡಿತು. ಈ ಹುಡುಗಿ ಒಂದು ದಿನ ಕೋಪಗೊಳ್ಳುವುದೂ. ಮತ್ತೊಂದು ದಿನ ಅಳತೆ ಮೀರಿದ ಸ್ನೇಹ ತೋರುವುದೂ ಏತಕ್ಕಾಗಿ—ಒಂದೊಂದು ದಿನ ನಿತ್ಯದ ಪಡಿಯನ್ನು ಹೆಚ್ಚಿಸಿಕೊಡುವುದೂ, ಒಂದೊಂದು ದಿನ ಆ ಪಡಿಯನ್ನು ಪೂರ್ತಿಯಾಗಿ ನಿಲ್ಲಿಸಿಬಿಡುವುದಾದರೂ ಏಕೆ ಎಂಬುದರ ಕಾರಣವನ್ನು ಅರಿಯುವುದು ಸಹಜವಾಗಿರಲಿಲ್ಲ. ಒಂದೊಂದು ದಿನ ಅವಳು ತನ್ನ ಎಲ್ಲ ಕಲ್ಪನೆ, ಭಾವನೆ ಮತ್ತು ನೈಪುಣ್ಯವನ್ನು ಒಗ್ಗೂಡಿಸಿ ಯುವಕನಿಗೆ ಸಂತೋಷವುಂಟುಮಾಡುವುದರಲ್ಲಿ ಪ್ರವೃತ್ತಳಾಗುತಿದ್ದಳು; ಮತ್ತೆ ಎಂದಾದರೂ ಒಂದು ದಿನ ತನ್ನೆಲ್ಲ ಕ್ಷುದ್ರ ಶಕ್ತಿಯನ್ನು, ತನ್ನೆಲ್ಲ ಕಠಿಣತೆಯನ್ನು, ಒಟ್ಟುಗೂಡಿಸಿ ಅವನನ್ನು ಹಿಂಸಿಸಲು ಯತ್ನಿಸುವಳು. ನೋಯಿಸಲು ಸಾಧ್ಯವಾಗದಿದ್ದರೆ ಅವಳ ಕಠಿಣತೆ ಇಮ್ಮಡಿಯಾಗುತಿತ್ತು. ಕೃತಕಾರ್ಯಳಾದುದಾದರೆ ಆ ಕಠಿಣತೆ ಪಶ್ಚಾತ್ತಾಪದ ಕಣ್ಣೀರ ಕಾಲುವೆಯಲ್ಲಿ ನೂರಾರು ಭಾಗವಾಗಿ ಹಂಚಿಹೋಗಿ ಎಣೆಯಿಲ್ಲದೆ ಸ್ನೇಹಧಾರೆಯಾಗಿ ಮಾರ್ಪಡುತಿತ್ತು.

ಈ ಕ್ಷುದ್ರ ಮೋಡ-ಬಿಸಿಲಿನ ಆಟದ ಕ್ಷುದ್ರ ಚರಿತ್ರೆಯ ಪ್ರಾರಂಭವನ್ನು ಮುಂದಿನ ಪರಿಚ್ಛೇದದಲ್ಲಿ ಸಂಕ್ಷೇಪವಾಗಿ ವಿವರಿಸಿದೆ.

## ದ್ವಿತೀಯ ಪರಿಚ್ಛೇದ

ಹಳ್ಳಿಯಲ್ಲಿ ಉಳಿದವರೆಲ್ಲ ವ್ಯಾಜ್ಯ ವ್ಯವಹಾರ, ಮೋಸ ತಟವಟ, ಕಬ್ಬಿನ ಬೇಸಾಯ, ಸುಳ್ಳು ವ್ಯಾಜ್ಯ ಮತ್ತು ಸೆಣಬಿನ ವ್ಯಾಪಾರದಲ್ಲಿ ಆಸಕ್ತರಾಗಿರುತಿದ್ದರು. ಭಾವನೆಯ ಆಲೋಚನೆ ಮತ್ತು ಸಾಹಿತ್ಯ ಚರ್ಚೆ ಇವುಗಳಲ್ಲಿ ಶಶಿಭೂಷಣ ಮತ್ತು ಗಿರಿಬಾಲೆ ಇವರಿಬ್ಬರು ಮಾತ್ರ ಆಸಕ್ತಿ ತೋರುತ್ತಿದ್ದರು.

ಈ ವಿಷಯದಲ್ಲಿ ಯಾರಿಗೇ ಆಗಲಿ ಯಾವುದೇ ವಿಧವಾದ ಭೇದ ಭಾವನೆ ಇರಲಿಲ್ಲ. ಯಾಕೆಂದರೆ, ಗಿರಿಬಾಲೆಯ ವಯಸ್ಸು ಹತ್ತು, ಮತ್ತು ಶಶಿಭೂಷಣ ಆಗತಾನೆ ಅರಳಿದ್ದ ಎಂ ಎ., ಬಿ ಎಲ್. ಪದವೀಧರ. ಇಬ್ಬರೂ ನೆರೆಮನೆಯವರು ಅಷ್ಟೆ.

ಗಿರಿಬಾಲೆಯ ತಂದೆ ಹರಕುಮಾರ ಒಂದಾನೊಂದು ಕಾಲದಲ್ಲಿ ಸ್ವತಃ ಹಳ್ಳಿಯಲ್ಲಿ ಗಣ್ಯ ಒಕ್ಕಲಾಗಿದ್ದನು ಈಗ ದುಃಸ್ಥಿತಿ ಹೊಂದಿ ಆಸ್ತಿಯೆಲ್ಲ ಮಾರಿ ತಮ್ಮ ವಿದೇಶಿ ಜಮೀನ್‌ದಾರನ ನಾಯಬನ ಪದವಿ ಅಂಗೀಕರಿಸಿದ್ದನು. ತಾನು ವಾಸವಾಗಿದ್ದ ಪರಗಣೆಯಲ್ಲೇ ಅವನ ನಾಯಬ್‌ಗಿರಿಯಿದ್ದುದರಿಂದ ಹುಟ್ಟಿದ ಊರು ಬಿಟ್ಟುಹೋಗಬೇಕಾದ ಆವಶ್ಯಕತೆ ಉಂಟಾಗಿರಲಿಲ್ಲ.

ಶಶಿಭೂಷಣ ಎಂ ಎ. ಪ್ಯಾಸ್ ಮಾಡಿ ನ್ಯಾಯಶಾಸ್ತ್ರದ ಪರೀಕ್ಷೆ ಕೊಟ್ಟಿದ್ದನು ಆದರೆ ಯಾವ ಬಗೆಯಲ್ಲೂ ಯಾವ ಕೆಲಸಕ್ಕೂ ಸೇರಿರಲಿಲ್ಲ. ಜನರೊಡನೆ ಕಲೆಯುವುದು ಅಥವಾ ಸಭೆಗಳಲ್ಲಿ ನಾಲ್ಕು ಮಾತನಾಡುವುದು ಇಷ್ಟೂ ಅವನಿಂದ ಸಾಧ್ಯವಾಗುತಿರಲಿಲ್ಲ. ದೃಷ್ಟಿ ಮಂದವಾಗಿದ್ದುದರಿಂದ ಗುರುತಿನ ಜನರನ್ನು ಗುರುತಿಸಲಾರದಿದ್ದನು. ಆ ಕಾರಣದಿಂದಲೇ ಹುಬ್ಬು ಗಂಟಿಕ್ಕಿಕೊಂಡು ನೋಡಬೇಕಾಗಿತ್ತು. ಜನ ಈ ನಡವಳಿಕೆಯನ್ನು ಉದ್ಧತತನವೆಂದು ಅನ್ನುತಿದ್ದರು.

ಕಲ್ಕತ್ತೆಯ ಜನಸಮುದ್ರದಲ್ಲಿ ತನ್ನಷ್ಟಕ್ಕೆ ತಾನು ಒಂಟಿಯಾಗಿರುವುದು ಲಕ್ಷಣವಾಗಿದ್ದೀತು; ಆದರೆ ಆ ನಡವಳಿಕೆ ನಿಮ್ಮನ್ನು ಹಳ್ಳಿಗಾಡಿನಲ್ಲಿ ಅಹಂಭಾವವೆಂದು ಭಾವಿಸಲಾಗುವುದು. ಶಶಿಭೂಷಣನ ತಂದೆ ಬಹಳ ಪ್ರಯತ್ನದ ಅನಂತರ ಸೋತವನಾಗಿ ಕೊನೆಗೆ ತನ್ನ ಕೆಲಸಕ್ಕೆ ಬಾರದ ಮಗನನ್ನು ಹಳ್ಳಿಯ ತಮ್ಮ ಸಾಮಾನ್ಯ ಆಸ್ತಿಯ ಮೇಲುಸ್ತುವಾರಿಯಲ್ಲಿ

ನಿಯಮಿಸಲು, ಶಶಿಭೂಷಣ ಹಳ್ಳಿಯವರ ಬಳಿ ಹಾಸ್ಯ, ಹಿಂಸೆ ಮತ್ತು ಅವ ಮಾನವನ್ನು ಸಹಿಸಬೇಕಾಗಿತ್ತು. ಅವಮಾನಕ್ಕೆ ಇನ್ನೂ ಒಂದು ಕಾರಣ ವಿತ್ತು ಶಾಂತಿಪ್ರಿಯ ಶಶಿಭೂಷಣ ಮದುವೆಯಾಗಲು ಒಪ್ಪಲಿಲ್ಲ ಮದು ವೆಗೆ ಬೆಳೆದು ನಿಂತಿದ್ದ ಹೆಣ್ಣುಗಳ ತಾಯಿತಂದೆಯರು ಅವನ ಈ ಅಸಮ್ಮತಿ ಯನ್ನು ದುಸ್ಸಹ ಅಹಂಕಾರವೆಂದು ತೀರ್ಮಾನಿಸಿ, ಯಾವ ಬಗೆಯಲ್ಲೂ ಕ್ಷಮಿಸಲಾರದವರಾಗಿದ್ದರು.

ಶಶಿಭೂಷಣನಿಗೆ ಹಿಂಸೆ ಹೆಚ್ಚಿದಂತೆಲ್ಲಾ ಅವನು ತನ್ನ ಬಿಲದಲ್ಲಿ ಕಣ್ಮರೆ ಯಾಗಿರತೊಡಗಿದ್ದನು. ಮೂಲೆಯ ಕೋಣೆಯೊಂದರಲ್ಲಿ ಹಲಗೆಯ ಮಂಚದ ಮೇಲೆ ಹಲವು ಆಂಗ್ಲ ಪುಸ್ತಕಗಳನ್ನು ಇಟ್ಟುಕೊಂಡು ಕುಳಿತಿರುತ್ತಿದ್ದನು. ಯಾವಾಗ ಯಾವುದರಲ್ಲಿ ಆಸಕ್ತಿಯಾಗುವುದೋ ಅದನ್ನು ಓದುತ್ತಿದ್ದನು. ಇದೇ ಅವನ ನಿತ್ಯಕರ್ಮವಾಗಿತ್ತು. ಆಸ್ತಿ ರಕ್ಷಣೆಯಾಗುವ ಮಾರ್ಗ ಯಾವುದು ಎನ್ನುವುದನ್ನು ಆಸ್ತಿಯೇ ಬಲ್ಲುದು.

ಜನಸಮೂಹದಲ್ಲಿ ಅವನ ಸಹವಾಸ ಕೇವಲ ಗಿರಿಬಾಲೆಯೊಡನೆ ಮಾತ್ರ ಎಂಬ ಅಂಶವನ್ನು ಮುಂಚೆಯೇ ಸ್ಥೂಲವಾಗಿ ವಿವರಿಸಿದೆ.

ಗಿರಿಬಾಲೆಯ ಒಡಹುಟ್ಟಿದವರು ಶಾಲೆಗೆ ಹೋಗುತ್ತಿದ್ದರು. ಹಿಂದಿರುಗಿ ಬಂದು ಮೂರ್ಖ ಸೋದರಿಯನ್ನು ಭೂಮಿಯ ಆಕಾರವೆಷ್ಟು ಎಂದು ಎಂದಾ ದರೂ ಪ್ರಶ್ನಿಸಿದರೆ, ಒಂದೊಂದು ದಿನ ಸೂರ್ಯ ದೊಡ್ಡವನೋ ಭೂಮಿ ದೊಡ್ಡದೋ ಎಂದು ಪ್ರಶ್ನಿಸುತ್ತಿದ್ದರು. ಅವಳು ತಪ್ಪು ಉತ್ತರ ಹೇಳಲು ಅವಳ ವಿಷಯದಲ್ಲಿ ಮಿತಿಮೀರಿದ ಅವಜ್ಞೆ ತೋರಿ ಅವಳ ತಪ್ಪನ್ನು ತಿದ್ದು ತ್ತಿದ್ದರು. 'ಸೂರ್ಯ ಭೂಮಿಗಿಂತ ದೊಡ್ಡವನು' ಎಂಬ ಅಭಿಪ್ರಾಯ ಪ್ರಮಾಣದ ಅಭಾವದಿಂದ ಗಿರಿಬಾಲೆಗೆ ನಿಜವೆಂದು ತೋರುತ್ತಿರಲಿಲ್ಲ. ತನ್ನ ಈ ಸಂದೇಹವನ್ನು ಅವಳೇನಾದರೂ ಸಾಹಸಪಟ್ಟು ಪ್ರಕಟಪಡಿಸಿದುದಾದರೆ ಅವಳ ಒಡಹುಟ್ಟಿದವರು ಇಮ್ಮಡಿ ಅವಜ್ಞೆಯೊಡನೆ—"ಇಸ್! ನಮ್ಮ ಪುಸ್ತಕದಲ್ಲಿ ಬರೆದಿದೆ, ಮತ್ತೆ ನೀನು—" ಎಂದನ್ನುತ್ತಿದ್ದರು.

ಅಚ್ಚಾದ ಪುಸ್ತಕದಲ್ಲಿ ಇಂತಹ ಮಾತುಗಳನ್ನು ಬರೆದಿದೆಯೆಂಬುದನ್ನು ಕೇಳಿ ಗಿರಿಬಾಲೆಯ ಬಾಯಿ ಮುಚ್ಚಿಹೋಗುತ್ತಿತ್ತು. ಮತ್ತಾವುದೇ ಬಗೆಯ ಪ್ರಮಾಣ ಅವಳಿಗೆ ಬೇಕಾಗಿರುತ್ತಿರಲಿಲ್ಲ.

ಆದರೆ ತಾನೂ ಅಣ್ಣಂದಿರಂತೆ ಪುಸ್ತಕಗಳನ್ನು ಹಿಡಿದು ಓದಬೇಕೆಂದು ಅವಳ ಮನಸ್ಸಿನಲ್ಲಿ ಅತಿಯಾಗಿ ಆಸೆ ಮೂಡಿರುತಿತ್ತು. ಒಂದೊಂದು ದಿನ ಅವಳು ತನ್ನ ಕೋಣೆಯಲ್ಲಿ ಕುಳಿತು ಯಾವುದಾದರೊಂದು ಪುಸ್ತಕ ಹಿಡಿದುಕೊಂಡು ಗಡಗಡನೆ ಓದುವಂತೆ ನಟಿಸುತಿದ್ದಳು. ಹಾಳೆಗಳ ಮೇಲೆ ಹಾಳೆಗಳನ್ನು ತಿರುವಿಹಾಕುತಿದ್ದಳು ಅಚ್ಚಾದ ಕಪ್ಪು ಕಪ್ಪು ಸಣ್ಣ ಸಣ್ಣ ಅಪರಿಚಿತ ಅಕ್ಷರಗಳು ಯಾವುದೋ ಒಂದು ರಹಸ್ಯಶಾಲೆಯ ಸಿಂಹದ್ವಾರದಲ್ಲಿ ಗುಂಪುಗುಂಪಾಗಿ ಸಾಲುಗಟ್ಟಿಕೊಂಡು ಹೆಗಲಮೇಲೆ ಆಕಾರ ಈಕಾರಗಳ ಚಿಹ್ನೆಗಳನ್ನು ಹೊತ್ತು ಪಹರೆಕೊಡುತಿರುವಂತೆ ಇದ್ದುವು. ಗಿರಿಬಾಲೆಯ ಯಾವ ಪ್ರಶ್ನೆಗೂ ಉತ್ತರಕೊಡುತ್ತಿರಲಿಲ್ಲ. ಕಥಾಮಾಲೆ ತನ್ನ ಹುಲಿ, ನರಿ, ಕುದುರೆ, ಕತ್ತೆ, ಮೊದಲಾದವುಗಳ ಒಂದು ಕಥೆಯನ್ನಾದರೂ ಕೌತೂಹಲ ಕಾತರಳಾದ ಆ ಬಾಲಿಕೆಯ ಬಳಿ ವಿವರಿಸುತಿರಲಿಲ್ಲ ಆಖ್ಯಾನ ಮಂಜರಿ ತನ್ನೆಲ್ಲ ಆಖ್ಯಾನಗಳನ್ನು ಅಡಗಿಸಿಕೊಂಡು ಮೌನವ್ರತದಂತೆ ಸದ್ದಿಲ್ಲದೆ ದಿಟ್ಟಿಸಿ ನೋಡುತಿತ್ತು.

ಗಿರಿಬಾಲೆ ತನ್ನ ಒಡಹುಟ್ಟಿದವರ ಬಳಿ ತಾನು ಓದುಬರಹ ಕಲಿಯಬೇಕೆಂದು ಪ್ರಸ್ತಾಪಮಾಡಿದ್ದಳು. ಆದರೆ ಅವರುಗಳು ಅವಳ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ಗಿರಿಬಾಲೆಗೆ ಕಥಾಮಾಲೆ ಮತ್ತು ಆಖ್ಯಾನಮಂಜರಿ ಇವುಗಳು ಹೇಗೆ ಭೇದಿಸಲಸಾಧ್ಯವಾಗಿದ್ದುವೋ, ಶಶಿಭೂಷಣನೂ ಮೊದಮೊದಲು ಹಾಗೆಯೇ ಇದ್ದ. ಕಬ್ಬಿಣದ ಸಲಾಕಿ ಹಾಕಿದ್ದ ಬೀದಿಯ ಕಡೆಯ ಕೋಣೆಯಲ್ಲಿ ಹಲಗೆಯ ಮಂಚದ ಮೇಲೆ ಸುತ್ತಲೂ ಪುಸ್ತಕಗಳೊಡನೆ ಒಬ್ಬನೇ ಕುಳಿತುಕೊಂಡು ಇರುತ್ತಿದ್ದನು. ಗಿರಿಬಾಲೆ ಸಲಾಕಿ ಹಿಡಿದುಕೊಂಡು ಹೊರಗೆ ನಿಂತುಕೊಂಡು ಮಾತಿಲ್ಲದೆ ಬೆನ್ನು ಬಗ್ಗಿಸಿಕೊಂಡು ಪಾಠದಲ್ಲಿ ಆಸಕ್ತನಾಗಿರುತಿದ್ದ ಈ ಅದ್ಭುತ ವ್ಯಕ್ತಿಯನ್ನು ದಿಟ್ಟಿಸಿ ನೋಡುತ್ತಿದ್ದಳು ಪುಸ್ತಕಗಳ ಸಂಖ್ಯೆ ಹೋಲಿಸಿ ಶಶಿಭೂಷಣ ತನ್ನ ಒಡಹುಟ್ಟಿದವರಿಗಿಂತ ಬಹು ದೊಡ್ಡ ವಿದ್ವಾಂಸನೆಂದು ತೀರ್ಮಾನಿಸಿಕೊಂಡಿದ್ದಳು. ಅದಕ್ಕಿಂತ ವಿಸ್ಮಯಕರವಾದ ವಿಷಯ ಅವನಲ್ಲಿ ಯಾವುದೂ ಇರಲಿಲ್ಲ. ಕಥಾಮಾಲೆ ಮೊದಲಾದ ಪ್ರಪಂಚದ ಮುಖ್ಯ ಮುಖ್ಯ ಪಠ್ಯಪುಸ್ತಕಗಳನ್ನು ಶಶಿಭೂಷಣ ಪೂರ್ತಿಯಾಗಿ ಓದಿಬಿಟ್ಟಿರುವನೆಂಬ ವಿಷಯದಲ್ಲಿ ಅವಳಿಗೆ

ಎಳ್ಳಷ್ಟು ಸಂದೇಹವೂ ಇರಲಿಲ್ಲ. ಇದರಿಂದಲೇ ಶಶಿಭೂಷಣ ಪುಸ್ತಕದ ಹಾಳೆಗಳನ್ನು ತಿರುವಿಹಾಕುತ್ತಿರಲು, ಅವಳು ನಿಂತುಕೊಂಡು ಅವನ ಅರಿವಿನ ಆಳತೆಯನ್ನು ನಿರ್ಣಯಿಸಲಾರದೆ ಇದ್ದಳು.

ಕೊನೆಗೆ ವಿಸ್ಮಯದಲ್ಲಿ ಮುಳುಗಿದ್ದ ಹುಡುಗಿ ಮಂದದೃಷ್ಟಿಯು ಶಶಿಭೂಷಣನ ಗಮನವನ್ನು ಸೆಳೆದಳು. ಶಶಿಭೂಷಣ ಒಂದು ದಿನ ಥಳಥಳನೆ ಹೊಳೆಯುತಿದ್ದ ಪುಸ್ತಕವೊಂದನ್ನು ತೆರೆದವನು—'ಗಿರಿಬಾಲೆ! ಬೊಂಬೆಗಳನ್ನು ನೋಡುವೆಯಾದರೆ ಬಾ' ಎಂದನು. ಗಿರಿಬಾಲೆ ತಕ್ಷಣ ಓಡಿ ಹೋದಳು.

ಆದರೆ, ಮರುದಿನ ಅವಳು ಹೊಲೆಮುಗ್ಗದ ಕಿರಿಗೆ ಉಟ್ಟು ಆ ಸಲಾಕಿಯ ಹೊರಗೆ ಎಂದಿನಂತೆ ಗಂಭೀರವೂ ಮೌನವೂ ಆಗಿ ನಿಂತು ನೆಟ್ಟ ದೃಷ್ಟಿಯಿಂದ ಶಶಿಭೂಷಣನ ಅಧ್ಯಯನವನ್ನು ನೋಡುತಿದ್ದಳು. ಶಶಿಭೂಷಣ ಅಂದು ಕರೆದನು. ಅಂದೂ ಅವಳು ಜಡೆಯನ್ನು ಜೋಲಾಡಿಸುತ್ತ ಊರ್ಧ್ವಶ್ವಾಸದೊಡನೆ ಓಡಿಹೋದಳು.

ಈ ವಿಧವಾಗಿ ಅವರುಗಳ ಪರಿಚಯದ ಪ್ರಾರಂಭವಾಗಿ ಯಾವಾಗ ಪ್ರಬಲವಾಯಿತೋ, ಯಾವ ವೇಳೆಯಲ್ಲಿ ಹುಡುಗಿ ಸಲಾಕಿಯ ಹೊರಗಿನಿಂದ ಶಶಿಭೂಷಣನ ಕೋಣೆಯೊಳಕ್ಕೆ ಕಾಲಿಟ್ಟಳೋ, ಅವನ ಹಲಗೆಯ ಮಂಚದಮೇಲೆ ಒಟ್ಟು ಹಾಕಿದ ಪುಸ್ತಕಗಳ ಅರುಗಿನಲ್ಲಿ ಸ್ಥಳ ಪಡೆದಳೋ ಆ ದಿನವನ್ನು ಗೊತ್ತಾಗಿ ಹೇಳಲು ಐತಿಹಾಸಿಕ ಸಂಶೋಧನೆ ಆವಶ್ಯಕ.

ಶಶಿಭೂಷಣನ ಬಳಿ ಗಿರಿಬಾಲೆಯು ಓದುಬರಹ ಆರಂಭವಾಯಿತು. ಈ ಸಂಗತಿ ಕೇಳಿ ಎಲ್ಲರೂ ನಕ್ಕರು. ಈ ಮಾಸ್ತರನು ತನ್ನ ಕ್ಷುದ್ರ ಶಿಷ್ಯಳಿಗೆ ಕೇವಲ ಅಕ್ಷರ, ಕಾಗುಣಿತ ಮತ್ತು ವ್ಯಾಕರಣ ಕಲಿಸುತಿದ್ದುದೇ ಅಲ್ಲ— ಅನೇಕ ಮಹಾಕಾವ್ಯಗಳನ್ನು ಅನುವಾದಿಸಿ ಹೇಳುತಿದ್ದನು. ಅವಳ ಅಭಿಪ್ರಾಯವನ್ನು ಕೇಳುತಿದ್ದನು. ಹುಡುಗಿ ಏನು ಅರಿಯುತಿದ್ದಳು ಎಂಬುದನ್ನು ಅಂತರ್ಯಾಮಿಯೇ ಬಲ್ಲ. ಆದರೆ ಈ ಕೆಲಸ ಅವಳಿಗೆ ಇಷ್ಟವಾಗಿತ್ತೆನ್ನಲು ಸಂದೇಹವಿಲ್ಲ. ಆ ಅರಿತುದು ಅರಿಯದಿದ್ದುದನ್ನು ಬೆರಸಿ ತನ್ನ ಎಳೆಯ ಹೃದಯದಲ್ಲಿ ಅಪೂರ್ವ ಕಲ್ಪನೆಯ ಚಿತ್ರ ಚಿತ್ರಿಸಿಕೊಳ್ಳುವಳು. ನಿಶ್ಶಬ್ದವಾಗಿ ಕಣ್ಣರಳಿಸಿಕೊಂಡು ಮನಗೊಟ್ಟು ಕೇಳುತಿದ್ದಳು. ಮಧ್ಯೆ ಮಧ್ಯೆ

ಒಂದೊಂದು ಅಸಂಗತ ಪ್ರಶ್ನೆ ಕೇಳುವಳು. ಒಂದೊಂದು ವೇಳೆ ಸಂಬಂಧ ವಿಲ್ಲದ ಪರಿಸ್ಥಿತಿಯನ್ನು ಮಾಲ್ಸುತಿದ್ದಳು ಶಶಿಭೂಷಣ ಇದಕ್ಕೆಲ್ಲ ಎಂದೂ ಯಾವುದೇ ಬಗೆಯ ಅಡ್ಡಿಮಾಡುತ್ತಿರಲಿಲ್ಲ—ಮಹಾಮಹಾ ಕಾವ್ಯಗಳ ವಿಷಯವಾಗಿ ಈ ಕ್ಷುದ್ರ ವಿಮರ್ಶಕಳ ನಿಂದೆ, ಪ್ರಶಂಸೆ, ಟೀಕೆ, ಭಾಷ್ಯ ಇವು ಗಳನ್ನು ಕೇಳಿ ಅವನು ಹೆಚ್ಚು ಆನಂದಪಡುತಿದ್ದನು. ಇಡೀ ಹಳ್ಳಿಯಲ್ಲಿ ಈ ಗಿರಿಬಾಲೆಯೇ ಅವನ ಏಕಮಾತ್ರ ಅರಿವುಳ್ಳ ಸ್ನೇಹಿತಳಾಗಿದ್ದಳು.

ಗಿರಿಬಾಲೆಯೊಡನೆ ಶಶಿಭೂಷಣನ ಮೊಟ್ಟಮೊದಲ ಪರಿಚಯವಾದಾಗ ಗಿರಿಯ ವಯಸ್ಸು ಎಂಟು. ಅವಳು ಇಂಗ್ಲೀಷ್ ಮತ್ತು ಬಂಗಾಲೀ ವರ್ಣ ಮಾಲೆ ಕಲಿತು ನಾಲ್ಕಾರು ಸುಲಭವಾದ ಪುಸ್ತಕಗಳನ್ನು ಓದಿ ಮುಗಿ ಸಿದ್ದಳು. ಶಶಿಭೂಷಣನಿಗೂ ಹಳ್ಳಿಗಾಡು ಈ ಎರಡು ವರ್ಷ ಸಂಪೂರ್ಣ ಜೊತೆಗಾರರಿಲ್ಲದ ಮರುಭೂಮಿಯಾಗಿ ತೋರಲಿಲ್ಲ.

## ತೃತೀಯ ಪರಿಚ್ಛೇದ

ಆದರೆ ಗಿರಿಬಾಲೆಯ ತಂದೆ ಹರಕುಮಾರನೊಡನೆ ಶಶಿಭೂಷಣನ ಪರಿಚಯ ಸರಿಯಾದ ಬಗೆಯಲ್ಲಿ ಇರಲಿಲ್ಲ ಹರಕುಮಾರ ಮೊದಮೊದಲು ಈ ಎಮ್.ಎ., ಬಿ ಎಲ್.ನ ಬಳಿ ವ್ಯಾಜ್ಯ ವ್ಯವಹಾರಗಳ ವಿಷಯವಾಗಿ ಸಲಹೆ ಕೇಳಲು ಬರುತಿದ್ದನು. ಎಮ್.ಎ., ಬಿ ಎಲ್. ಆ ವಿಷಯಗಳಲ್ಲಿ ಹೆಚ್ಚು ಆಸಕ್ತಿ ತೋರುತಿರಲಿಲ್ಲ. ವಕೀಲೀ ವಿದ್ಯೆಯ ವಿಷಯವಾಗಿ ನಾಯಬ ರಲ್ಲಿ ಅಜ್ಞತೆಯನ್ನು ಪ್ರಕಟಪಡಿಸಲು ಹಿಂದೆಗೆಯುತಿರಲಿಲ್ಲ.

ಒಮ್ಮೆ ಬಹಳ ಪುಂಡನಾದ ರೈತನೊಬ್ಬನಿಗೆ ತಕ್ಕ ಶಾಸ್ತಿ ಮಾಡಬೇಕಾದ ಸಂದರ್ಭವಿತ್ತು. ನಾಯಬ ಮಹಾಶಯರು ಅವನ ಹೆಸರಿನಲ್ಲಿ ಬೇರೆ ಬೇರೆ ಜಿಲ್ಲೆಗಳಲ್ಲಿ ಬೇರೆ ಬೇರೆ ಅಪರಾಧದ ಮೊಕದ್ದಮೆ ಹೂಡುವ ಅಭಿಪ್ರಾಯ ಹೊರಗೆಡವಿ, ಸಲಹೆಗಾಗಿ ಶಶಿಭೂಷಣನನ್ನು ಸ್ವಲ್ಪ ಹೆಚ್ಚಾಗಿಯೇ ಬಲಾ ತ್ಕರಿಸಿದರು. ಶಶಿಭೂಷಣ ಸಲಹೆ ಕೊಡುವುದಿರಲಿ, ನೆಮ್ಮದಿಯಿಂದ ದೃಢ ಭಾವದಿಂದ ಹರಕುಮಾರರಿಗೆ ಯಾವ ವಿಧದಲ್ಲೂ ರುಚಿಸದಂತಹ ನಾಲ್ಕಾರು ಮಾತುಗಳನ್ನು ಹೇಳಿದನು.

ಇತ್ತ ರೈತನಮೇಲೆ ಹೂಡಿದ ವ್ಯಾಜ್ಯಗಳಲ್ಲಿ ಒಂದರಲ್ಲೂ ಹರ ಕುಮಾರರು ಜಯಶೀಲರಾಗಲಿಲ್ಲ. ಆ ದೌರ್ಭಾಗ್ಯ ರೈತನಿಗೆ ಶಶಿಭೂಷಣ ಸಹಾಯಕನಾಗಿದ್ದನೆಂದೇ ಹರಕುಮಾರರ ಮನಸ್ಸಿನಲ್ಲಿ ದೃಢವಾಯಿತು. ಇಂತಹ ಮನುಷ್ಯನನ್ನು ಸಾವಕಾಶಮಾಡದೆ ಹಳ್ಳಿಯಿಂದಲೇ ಅಟ್ಟಬೇಕೆಂದು ಆತ ಪಣ ತೊಟ್ಟರು.

ಶಶಿಭೂಷಣ ತನ್ನ ಹೊಲಕ್ಕೆ ದನಕರುಗಳು ನುಗ್ಗುವುದನ್ನೂ, ಬಣ ವೆಗೆ ಬೆಂಕಿ ಬೀಳುವುದನ್ನೂ, ಜಮೀನಿನ ಎಲ್ಲೆಯನ್ನು ಕುರಿತು ಜಗಳ ತಲೆ ಯೆತ್ತುವುದನ್ನೂ, ಅವನ ರೈತರು ಗುತ್ತಿಗೆ ಸರಿಯಾಗಿ ಕೊಡದಿರುವುದನ್ನೂ, ಅವನಮೇಲೆ ಸುಳ್ಳು ವ್ಯಾಜ್ಯ ಹೂಡತೊಡಗಿದ್ದನ್ನೂ ಕಂಡನು. ಹೆಚ್ಚೇಕೆ ಸಂಜೆಯ ವೇಳೆಯಲ್ಲಿ ಬೀದಿಯಲ್ಲಿ ಹೊರಟರೆ ಅವನನ್ನು ಹೊಡೆಯು ವುದಾಗಿಯೂ, ಅವನ ಮನೆಗೆ ಬೆಂಕಿ ಹಚ್ಚುವುದಾಗಿಯೂ, ಮುಂತಾದ ಮಾತುಗಳು ಜನಗಳಲ್ಲಿ ಕಿವಿಯಿಂದ ಕಿವಿಗೆ ಹರಡಿ ಅವನ ಕಿವಿ ಮುಟ್ಟಿತ್ತು.

ಕೊನೆಗೆ ಶಾಂತಿಪ್ರಿಯನೂ ಸರಳಸ್ವಭಾವದವನೂ ಆದ ಶಶಿಭೂಷಣ ಹಳ್ಳಿಯನ್ನು ಬಿಟ್ಟು ಕಲ್ಕತ್ತೆಗೆ ನಡೆದುಬಿಡಲು ಸಿದ್ಧನಾದನು.

ಪ್ರಯಾಣಕ್ಕೆ ಪ್ರಯತ್ನಮಾಡುತ್ತಿರುವ ಸಮಯದಲ್ಲಿ ಹಳ್ಳಿಯಲ್ಲಿ ಜಾಯಿಂಟ್ ಮ್ಯಾಜಿಸ್ಟ್ರೇಟ್ ಸಾಹೇಬರ ಗುಡಾರ ಹೊಡೆಯಲಾಯಿತು. ಕಟ್ಟಿಗೆಯವರು, ಬಿಲ್ಲೆ ಜವಾನರು, ಖಾನ್‌ಸಾಮಾ, ನಾಯಿ, ಕುದುರೆ, ಕಾಸ್ತಾರ, ಗುಡಿಸುವವ—ಇವರುಗಳಿಂದ ಹಳ್ಳಿಯಲ್ಲಿ ಉಲ್ಲೋಲಕಲ್ಲೋಲ ವುಂಟಾಯಿತು. ಹುಡುಗರ ಗುಂಪು ಹುಲಿಯನ್ನು ಹಿಂಬಾಲಿಸುವ ನರಿಗಳ ಹಿಂಡಿನಂತೆ ಸಾಹೇಬರ ಠಾಣ್ಯದ ಬಳಿ ಸಂದೇಹ ಕುತೂಹಲಗಳೊಡನೆ ತಿರುಗಾಡುತಿದ್ದರು.

ನಾಯಬ್ ಮಹಾಶಯರು ಪದ್ಧತಿಯಂತೆ ಆತಿಥ್ಯದ ಪಟ್ಟಿಯಲ್ಲಿ ಲೆಕ್ಕ ಬರೆದು ಸಾಹೇಬರಿಗೆ ಕೋಳಿ, ಮೊಟ್ಟೆ, ತುಪ್ಪ, ಹಾಲು ಶೇಖರಿಸಲು ಆರಂಭಿ ಸಿದರು. ಜಾಯಿಂಟ್ ಸಾಹೇಬರಿಗೆ ಬೇಕಾಗುವ ಲವಾಜಮೆಯ ಅಳತೆಗಿಂತ ಹೆಚ್ಚಾಗಿಯೇ ನಾಯಬರು ಒದಗಿಸಿದ್ದರು. ಆದರೆ ಬೆಳಗ್ಗೆ ಸಾಹೇಬರ ಮೆಹ ತರ (ಗುಡಿಸುವವ)ನು ಬಂದು ಸಾಹೇಬರ ನಾಯಿಗಾಗಿ ಒಮ್ಮೆಗೆ ನಾಲ್ಕು ಸೇರು ತುಪ್ಪ ಕೇಳಲು ದುರ್ಗ್ರಹವಶದಿಂದ ನಾಯಬರಿಗೆ ಅದು ಸಹಿಸಲಸಾಧ್ಯ

ವಾಯಿತು. ಸಾಹೇಬರ ಸೀಮೆಯ ನಾಯಿ ದೇಶೀಯ ನಾಯಿಗಳಿಗಿಂತ ಸುಲಭ ವಾಗಿ ಹೆಚ್ಚು ತುಪ್ಪ ಜೀರ್ಣಿಸಿಕೊಳ್ಳಬಲ್ಲುದಾದರೂ ಇಷ್ಟೊಂದು ಹೆಚ್ಚು ಅಳತೆಯಲ್ಲಿ ಜಿಡ್ಡಿನ ಪದಾರ್ಥ ಕೊಡುವುದು ಅದರ ಆರೋಗ್ಯಕ್ಕೆ ಕೇಡನ್ನುಂಟುಮಾಡದಿರದು ಎಂದು ನಾಯಬರು ಮೆಹತರನಿಗೆ ಉಪದೇಶ ಮಾಡಿದರು. ಅವನಿಗೆ ತುಪ್ಪ ಕೊಡಲಿಲ್ಲ.

ಮೆಹತರನು ಹೋಗಿ ನಾಯಿಗೋಸ್ಕರ ಮಾಂಸ ಎಲ್ಲಿ ಸಿಕ್ಕುವುದೆಂದು ತಾನು ನಾಯಬರನ್ನು ಕೇಳಿದುದಾಗಿಯೂ, ತಾನು ಜಾತಿಯಲ್ಲಿ ಮೆಹತರನೆಂದು ನಾಯಬರು ಧಿಕ್ಕಾರದೊಡನೆ ಅವನನ್ನು ಎಲ್ಲ ಜನರ ಇದಿರಿನಲ್ಲಿ ದೂರ ಓಡಿಸಿದರೆಂದೂ, ಅಷ್ಟೇ ಅಲ್ಲ ಸಾಹೇಬರನ್ನು ಕುರಿತೂ ಅಲಕ್ಷ್ಯದ ಮಾತು ಗಳನ್ನಾಡಲು ಹಿಂದೆಗೆಯಲಿಲ್ಲವೆಂದೂ ಸಾಹೇಬರಲ್ಲಿ ದೂರು ಹೇಳಿದನು.

ಮೊದಲೇ ಬ್ರಾಹ್ಮಣರ ಜಾತಿ ಅಭಿಮಾನ ಸಾಹೇಬ ಜನರಿಗೆ ಸಹಜ ವಾಗಿಯೇ ಅಸಹನೀಯವಾಗಿರುತಿತ್ತು. ಅದರಮೇಲೆ ತಮ್ಮ ಮೆಹತರನನ್ನು ಅವಮಾನಗೊಳಿಸುವಷ್ಟು ಎದಗಾರಿಕೆಯುಂಟಾಗಿರುವುದನ್ನು ಕಂಡು ಜಾಯಿಂಟ್ ಸಾಹೇಬರಿಂದ ತೆಪ್ಪನಿರಲಾಗಲಿಲ್ಲ. ತಕ್ಷಣ ಬಿಲ್ಲೆಯವನನ್ನು ಕರೆದು—ನಾಯಬನನ್ನು ಕರೆ ಎಂದರು.

ನಾಯಬರು ನಡುಗುವ ಮೈಯೊಡನೆ ದುರ್ಗಿಯ ನಾಮ ಜಪಿಸುತ್ತ ಸಾಹೇಬರ ಡೇರೆಯ ಇದಿರಿನಲ್ಲಿ ಬಂದು ನಿಂತರು. ಸಾಹೇಬರು ಡೇರೆಯಿಂದ ಚರಪರ ಸದ್ದುಮಾಡುತ್ತ ಹೊರಬಿದ್ದು, ನಾಯಬನನ್ನು ಗಟ್ಟಿಯಾಗಿ ವಿಜಾತೀಯ ಉಚ್ಚಾರಣೆಯಲ್ಲಿ—ಟುಮಿ ಕೀ ಕಾರಣವಶಟೊ ಆಮಾರ್ ಮೆಠರ್‌ಕಿ ಡೂರ್ ಕರಿಯಾಛೆ (ನೀನು ಯಾವ ಕಾರಣಕ್ಕಾಗಿ ನಮ್ಮ ಮೆಹತರನನ್ನು ದೂರ ಓಡಿಸಿದೆ) ಎಂದು ಕೇಳಿದರು.

ಹರಕುಮಾರ ಬೆಚ್ಚಿಬಿದ್ದು ಸಾಹೇಬರ ಮೆಹತರನನ್ನು ದೂರ ತಳ್ಳು ವಂತಹ ಸಾಹಸ ತನಗೆಂದೆಂದೂ ಉಂಟಾಗದು. ವಾಸ್ತವ್ಯದಲ್ಲಿ ನಾಯಿಗಾಗಿ ಒಮ್ಮೆಗೆ ನಾಲ್ಕು ಸೇರು ತುಪ್ಪ ಕೇಳಲು ಆ ಪ್ರಾಣಿಯ ಒಳ್ಳೆಯದಕ್ಕಾಗಿ ಮೊದಲು ಮೆದುವಾದ ರೀತಿಯಲ್ಲಿ ನಿರಾಕರಿಸಿದರೂ ತುಪ್ಪ ಸಂಗ್ರಹಿಸಿ ತರಲು ಜನರನ್ನು ಅಟ್ಟಿರುವುದಾಗಿ ತಿಳಿಸಿದನು.

ಸಾಹೇಬರು ಯಾರನ್ನು ಕಳುಹಿಸಿರುವೆ, ಎಲ್ಲಿಗೆ ಕಳುಹಿಸಿರುವೆ ಎಂದು ಕೇಳಿದರು.

ಹರಕುಮಾರ ಆ ಕ್ಷಣದಲ್ಲಿ ನೆನಪು ಬಂದ ಹೆಸರುಗಳನ್ನು ಹೇಳಿಬಿಟ್ಟನು. ಸಾಹೇಬರು ಆಯಾ ಹೆಸರಿನ ಜನರು ಆಯಾ ಹಳ್ಳಿಗಳಿಗೆ ತುಪ್ಪ ತರಲು ಹೋಗಿರುವರೇ ಇಲ್ಲವೇ ಎಂಬುದನ್ನು ವಿಚಾರಿಸಿಕೊಂಡು ಬರಲು, ಅತಿ ತ್ವರೆಯಿಂದ ಜನರನ್ನು ಕಳುಹಿಸಿ, ಹರಕುಮಾರನು ಗುಡಾರದಲ್ಲಿ ಕುಳಿತಿರುವಂತೆ ಅಪ್ಪಣೆ ಮಾಡಿದರು.

ಜವಾನರು ಮಧ್ಯಾಹ್ನ ಹಿಂದಿರುಗಿ ತುಪ್ಪ ಶೇಖರಿಸಲು ಯಾರೂ ಎಲ್ಲಿಗೂ ಹೋಗಿಲ್ಲವೆಂದು ತಿಳಿಸಿದರು. ನಾಯಬನ ಮಾತೆಲ್ಲ ಸುಳ್ಳು; ಮೊಹತರನು ಏನು ಹೇಳಿದನೋ ಅದೆಲ್ಲ ಸತ್ಯ ಎನ್ನುವುದರಲ್ಲಿ ಮ್ಯಾಜಿಸ್ಟ್ರೇಟರಿಗೆ ಸಂದೇಹವಿರಲಿಲ್ಲ. ಆಗ ಜಾಯಿಂಟ್ ಸಾಹೇಬರು 'ಈ ಶ್ಯಾಲಕನ ಕಿವಿ ಹಿಡಿದು ಗುಡಾರದ ನಾಲ್ಕು ಕಡೆಯೂ ಓಡಿಸಿ' ಎಂದು ಅಪ್ಪಣೆಮಾಡಿದರು. ಮೊಹತರನು ವಿಳಂಬಮಾಡದೆ ನಾಲ್ಕು ದಿಕ್ಕಿನ ಜನಸಮೂಹದ ನಡುವೆ ಸಾಹೇಬರ ಅಪ್ಪಣೆಯನ್ನು ಪಾಲಿಸಿದನು.*

ನೋಡನೋಡುತ್ತ ಸುದ್ದಿ ಮನೆಯಿಂದ ಮನೆಗೆ, ಹಳ್ಳಿಯಿಂದ ಹಳ್ಳಿಗೆ ಹಬ್ಬಿಬಿಟ್ಟಿತು. ಹರಕುಮಾರ ಮನೆಗೆ ಬಂದು ಅನ್ನನೀರು ಬಿಟ್ಟು ಮುಮೂರ್ಷುವಿನಂತೆ ಹಾಸಿಗೆ ಹಿಡಿದನು.

ಜಮೀನ್ದಾರಿ ಕೆಲಸದ ಕಾರಣದಿಂದ ನಾಯಬರಿಗೆ ಬಹಳ ಜನ ಶತ್ರುಗಳಿದ್ದರು. ಅವರುಗಳು ಈ ಘಟನೆಯಿಂದ ಅತ್ಯಾನಂದಪಡೆದರು. ಆದರೆ ಕಲ್ಕತ್ತೆಗೆ ಹೊರಡಲು ಸಿದ್ಧನಾಗಿದ್ದ ಶಶಿಭೂಷಣ ಈ ಸುದ್ದಿಯನ್ನು

---

* ಈ ಅಂಶವನ್ನು ಕುರಿತು ಮೂಲದಲ್ಲಿ ಮುಂದೆ ಹೇಳಿರುವಂತೆ ಲೇಖಕರ ಟಿಪ್ಪಣಿ ಇದೆ.—ಅನುವಾದಕ

"ಖುಲ್ನಾದ ಮ್ಯಾಜಿಸ್ಟ್ರೇಟರು ಗುಮಾಸ್ತೆಯನ್ನು ಹೊಡೆದ ಸಂದರ್ಭಕ್ಕಿಂತ ಮುಂಚೆ ಈ ಕತೆ ಬರೆಯಲಾಯಿತು. ಬೆಲ್ ಸಾಹೇಬರ ಸಹೃದಯ, ನ್ಯಾಯಬುದ್ಧಿಯ ವಿಷಯ ನಾನು ಬಹಳ ಅಂಶ ಬಲ್ಲೆ. ಅವರಂತಹ ಉದಾರ ವ್ಯಕ್ತಿಯ ವಿರುದ್ಧವಾಗಿ ಟೀಕಿಸುವುದು ನನ್ನ ಉದ್ದೇಶವಲ್ಲ.

ಕೇಳಿದಾಗ ಅವನ ಅಂಗಾಂಗದ ರಕ್ತ ಕುದಿಯಿತು. ಇಡೀ ರಾತ್ರಿ ಅವನಿಗೆ ನಿದ್ರೆ ಹತ್ತಲಿಲ್ಲ.

ಮರುದಿನ ಬೆಳಗ್ಗೆ ಅವನು ಹರಕುಮಾರನ ಮನೆಗೆ ಹೋಗಿ ತಲುಪಿದನು. ಹರಕುಮಾರ ಅವನ ಕೈಗಳನ್ನು ಹಿಡಿದುಕೊಂಡು ವ್ಯಾಕುಲ ಭಾವದಿಂದ ಅಳಲಾರಂಭಿಸಿದನು. 'ಸಾಹೇಬರ ಮೇಲೆ ಮಾನಹಾನಿಯ ವ್ಯಾಜ್ಯ ಹೂಡಬೇಕು, ನಾನು ನಿಮ್ಮ ವಕೀಲನಾಗಿ ವಾದಿಸುವೆ' ಎಂದು ಶಶಿಭೂಷಣನೆಂದನು.

ಸ್ವತಃ ಮ್ಯಾಜಿಸ್ಟ್ರೇಟರ ಮೇಲೆಯೇ ವ್ಯಾಜ್ಯ ಹೂಡಬೇಕೆಂಬ ಸಂಗತಿ ಕೇಳಿ ಹರಕುಮಾರ ಮೊದಲು ಅಂಜಿದನು. ಆದರೆ ಶಶಿಭೂಷಣ ಯಾವ ಬಗೆಯಲ್ಲೂ ಬಿಡದಿದ್ದನು.

ಹರಕುಮಾರ ಆಲೋಚಿಸಲು ಅವಕಾಶ ಪಡೆದನು. ಆದರೆ ಈ ಸುದ್ದಿ ನಾಲ್ಕೂ ಕಡೆ ಸೀಮೆರಾಜ್ಯವೆಲ್ಲಾ ಹರಡಿದ್ದುದನ್ನೂ, ಶತ್ರುಗಳು ಇದರಿಂದ ಸಂತೋಷಪಡುತ್ತಿರುವುದನ್ನೂ ಕಂಡಾಗ ಆತ ನೆಮ್ಮದಿಯಿಂದ ಇರಲಾರದೆ ಹೋದನು. ಶಶಿಭೂಷಣನ ಮರೆಹೊಕ್ಕನು. "ಅಪ್ಪಾ, ನೀನು ವ್ಯರ್ಥಕ್ಕೆ ಕಲ್ಕತ್ತೆಗೆ ಹೋಗಲಿರುವೆಯೆಂದು ಕೇಳಿದೆ. ಆ ಕೆಲಸ ಖಂಡಿತ ಆಗದು. ನಿನ್ನಂತಹ ವ್ಯಕ್ತಿಯೊಬ್ಬ ಗ್ರಾಮದಲ್ಲಿ ಇದ್ದುದಾದರೆ ನಮ್ಮಗಳಿಗೆ ಎಷ್ಟು ಧೈರ್ಯವಿದ್ದೀತು. ಏನಾದರೂ ಆಗಲಿ, ನನ್ನನ್ನು ಈ ಘೋರ ಅವಮಾನದಿಂದ ಉದ್ಧಾರಮಾಡು" ಎಂದನು.

## ಚತುರ್ಥ ಪರಿಚ್ಛೇದ

ಸದಾ ಕಾಲ ಜನರ ದೃಷ್ಟಿಯಿಂದ ಮರೆಯಾಗಿ ಏಕಾಂಗಿಯಾಗಿ ಇರುತ್ತಿದ್ದ ಶಶಿಭೂಷಣ ಇಂದು ಕೋರ್ಟಿಗೆ ಬಂದು ನಿಂತನು. ಮ್ಯಾಜಿಸ್ಟ್ರೇಟರು ಅವನ ದೂರನ್ನು ಕೇಳಿ ಅವನನ್ನು ಖಾಸಗೀ ಕೋಣೆಗೆ ಕರೆಸಿಕೊಂಡು ಬಹಳ ಆದರ ತೋರಿ "ಶಶಿಬಾಬೂ! ಈ ವ್ಯಾಜ್ಯವನ್ನು ಗುಟ್ಟಾಗಿ ತೀರ್ಮಾನಿಸಿಕೊಂಡರೆ ಒಳ್ಳೆಯದಲ್ಲವೆ?" ಎಂದರು.

ಶಶಿಬಾಬು ಮೇಜಿನಮೇಲಿದ್ದ ಕಾನೂನು ಪುಸ್ತಕವೊಂದರ ಮೇಲೆ ತನ್ನ ಹುಬ್ಬುಗಂಟಿಕ್ಕಿದ ಮಂದದೃಷ್ಟಿಯನ್ನು ಅತ್ಯಂತ ಏಕಾಗ್ರತೆಯಿಂದ

ಬೀರಿ—'ನನ್ನ ಕಕ್ಷಿಗಾರರಿಗೆ ನಾನು ಈ ಸಲಹೆ ಕೊಡಲಾರೆ. ಆತ ಬಹಿರಂಗ ವಾಗಿ ಅವಮಾನಿತರಾಗಿರುವರು. ಗುಟ್ಟಾಗಿ ಇದನ್ನು ಸರಿಪಡಿಸಿಕೊಳ್ಳು ವುದಾದರೂ ಹೇಗೆ' ಎಂದನು.

ಸಾಹೇಬರು ನಾಲ್ಕಾರು ಮಾತುಗಳನ್ನಾಡಿ ಈ ಅಲ್ಪಭಾಷಿ ಕ್ಷೀಣ ದೃಷ್ಟಿಯ ಮನುಷ್ಯನನ್ನು ಸುಲಭದಲ್ಲಿ ವಿಚಲಿತಗೊಳಿಸುವುದು ಸಾಧ್ಯವಲ್ಲ ವೆಂದು ತಿಳಿದವರಾಗಿ—"ಆಲ್‌ರೈಟ್ ಬಾಬು, ಎಷ್ಟು ದೂರ ಹೋದರೆ ಏನಾಗುವುದೊ—ನೋಡೋಣ" ಎಂದರು.

ಇಷ್ಟು ಹೇಳಿ ಮೊಕದ್ದಮೆಯ ದಿನ ಮುಂದಕ್ಕೆ ತಳ್ಳಿ ಪರಸ್ಥಳಕ್ಕೆ ಸಂಚಾರ ಹೊರಟರು.

ಇತ್ತ ಜಾಯಿಂಟ್ ಸಾಹೇಬರು—"ನಿಮ್ಮ ನಾಯಬ ನನ್ನ ಆಳು ಗಳನ್ನು ಅವಮಾನಗೊಳಿಸಿ ನನ್ನಲ್ಲಿ ಅಲಕ್ಷ್ಯ ತೋರುತ್ತಿರುವನು. ನೀವು ಇದಕ್ಕೆ ತಕ್ಕ ಪ್ರತೀಕಾರಮಾಡುವಿರೆಂದು ಎಣಿಸುತ್ತೇನೆ" ಎಂದು ಜಮೀನು ದಾರರಿಗೆ ಕಾಗದ ಬರೆದರು.

ಜಮೀನುದಾರರು ತಲ್ಲಣಗೊಂಡು ತಕ್ಷಣ ಹರಕುಮಾರನನ್ನು ಕರೆಯ ಕಳುಹಿದರು. ನಾಯಬನು ಮೊದಲಿಂದ ಕೊನೆಯವರೆಗೆ ಎಲ್ಲ ಘಟನೆ ಯನ್ನೂ ವಿವರಿಸಿದನು. ಜಮೀನುದಾರರು ಬಹಳ ಬೇಸರಗೊಂಡು— "ಸಾಹೇಬರ ಮೆಹತರನು ನಾಲ್ಕು ಸೇರು ತುಪ್ಪ ಕೇಳಿದ್ದರೆ ನೀನು ವ್ಯರ್ಥದ ಮಾತು ಬೆಳಸದೆ ತಕ್ಷಣ ಕೊಡಲಿಲ್ಲವೇಕೆ. ನಿಮ್ಮಪ್ಪನ ಆಸ್ತಿ ಸವೆಯು ತಿತ್ತೇನು?" ಎಂದರು.

ಇದರಿಂದ ತಮ್ಮ ಅಪ್ಪನ ಆಸ್ತಿಗೆ ಏನೇನೂ ನಷ್ಟವಾಗುತಿರಲಿಲ್ಲವೆಂಬ ಅಂಶವನ್ನು ಹರಕುಮಾರನು ಒಪ್ಪಲಿರದಾದನು. ತಪ್ಪನ್ನು ಒಪ್ಪಿಕೊಂಡು "ನನ್ನ ಗ್ರಹಗತಿ ಕೆಟ್ಟಿತ್ತು. ಅದರಿಂದಲೇ ಇಂತಹ ದುರ್ಬುದ್ಧಿ ಹುಟ್ಟಿತು" ಎಂದನು.

'ಅದರಮೇಲೆ ಸಾಹೇಬರ ಮೇಲೆ ವ್ಯಾಜ್ಯ ಹೂಡಲು ನಿನಗೆ ಹೇಳಿ ದವರು ಯಾರು?' ಎಂದು ಜಮೀನುದಾರರು ಕೇಳಿದರು.

ಹರಕುಮಾರನು "ಧರ್ಮಾವತಾರ, ವ್ಯಾಜ್ಯ ಹೂಡುವ ಇಚ್ಛೆ ನನ ಗಿರಲಿಲ್ಲ ನಮ್ಮ ಗ್ರಾಮದ ಶಶಿ—ಅವನಿಗೆ ಎಲ್ಲೂ ಯಾವುದೂ ಮೊಕದ್ದಮೆ

ಸಿಕ್ಕುತ್ತಿಲ್ಲವಲ್ಲ— ಅವನು ಬಲಾತ್ಕರಿಸಿ ಬಹುಮಟ್ಟಿಗೆ ನನ್ನ ಒಪ್ಪಿಗೆ ಪಡೆಯುದೆಯೇ ಈ ಗೊಂದಲವೆಬ್ಬಿಸಿರುವನು” ಎಂದನು.

ಇದನ್ನು ಕೇಳಿ ಜಮೀನುದಾರರು ಶಶಿಭೂಷಣನ ಮೇಲೆ ಬಹಳ ಸಿಟ್ಟಾದರು. “ಈ ಮನುಷ್ಯ ಕೆಲಸಕ್ಕೆ ಬಾರದ ಹೊಸ ವಕೀಲ. ಯಾವುದೋ ಒಂದು ಬಗೆಯಲ್ಲಿ ನಾಲ್ಕು ಜನರ ಮುಂದೆ ಪ್ರಸಿದ್ಧನಾಗಲು ಯತ್ನಿಸುತ್ತಿರುವನು” ಎಂದು ಜಮೀನುದಾರರು ತೀರ್ಮಾನಿಸಿದರು. ತಕ್ಷಣ ಮೊಕದ್ದಮೆ ಹಿಂದಕ್ಕೆ ತೆಗೆದುಕೊಂಡು ಚಿಕ್ಕ ಮತ್ತು ದೊಡ್ಡ ಮ್ಯಾಜಿಸ್ಟ್ರೇಟರನ್ನು ಸಮಾಧಾನಪಡಿಸಬೇಕೆಂದು ಹರಕುಮಾರನಿಗೆ ಅಪ್ಪಣೆ ಮಾಡಿದರು.

ನಾಯಬನು ಸಾಹೇಬರಿಗಾಗಿ ಅಕ್ಕಿ ಹಿಟ್ಟು ಫಲಮೂಲ ಆದಿ ತಂಪಿನ ನೈವೇದ್ಯವನ್ನು ತೆಗೆದುಕೊಂಡು ಜಾಯಿಂಟ್ ಮ್ಯಾಜಿಸ್ಟ್ರೇಟರ ವಾಸಸ್ಥಾನವನ್ನು ಸೇರಿದನು. ಸಾಹೇಬರ ಮೇಲೆ ವ್ಯಾಜ್ಯ ಹೂಡಿವುದು ತನ್ನ ಸ್ವಭಾವದಲ್ಲೇ ಇಲ್ಲದ ವಿಷಯವೆಂದೂ, ಕೇವಲ ಶಶಿಭೂಷಣನೆಂಬ ಗ್ರಾಮದ ಪಿಸಾಸೆ ಮೊಳೆಯದ ಎಳೆವಯಸ್ಸಿನ ವಕೀಲನೊಬ್ಬ ತನಗೆ ಒಂದು ವಿಧದಲ್ಲಿ ತಿಳಿಸದೆಯೇ ಇಂತಹ ಕೆಲಸಮಾಡಿದನೆಂದೂ ತಿಳಿಸಿದನು. ಸಾಹೇಬರು ಶಶಿಭೂಷಣನ ಮೇಲೆ ಬಹಳ ಕೋಪಗೊಂಡು ನಾಯಬರ ವಿಷಯದಲ್ಲಿ ದುಃಖಿತರಾದರು. ಸಿಟ್ಟಿನ ಭರದಲ್ಲಿ ನಾಯಬ್ ಬಾಬುಗಳಿಗೆ “ದಂಡವಿಧಾನ” (ದಂಡವಿಧಿಸಿ) ಮಾಡಿ ತಾವು ದುಃಖಿತರಾಗಿರುವರೆಂದು ತಿಳಿಸಿದರು. ಸಾಹೇಬರು ಬಂಗಾಲೀ ಭಾಷೆಯಲ್ಲಿ ಪರೀಕ್ಷೆಕೊಟ್ಟು ಬಹುಮಾನಪಡೆದು ಜನಸಾಮಾನ್ಯರೊಡನೆ ಗ್ರಂಥದ ಭಾಷೆಯಲ್ಲಿ ಮಾತನಾಡುತಿದ್ದರು.

‘ತಾಯಿತಂದೆಗಳು ಕೋಪಗೊಂಡು ಶಿಕ್ಷಿಸುವರು, ಅಥವಾ ಆದರಿಸಿ ಮಡಿಯಲ್ಲಿಯೂ ಎತ್ತಿಕೊಳ್ಳುವರು. ಇದರಿಂದ ಮಕ್ಕಳಿಗೋ ಅಥವಾ ಹೆತ್ತವರಿಗೋ ದುಃಖದ ಕಾರಣವೇನೂ ಇಲ್ಲ’ ಎಂದು ಹರಕುಮಾರನೆಂದನು.

ಅನಂತರ ಜಾಯಿಂಟ್ ಸಾಹೇಬರ ಭೃತ್ಯವರ್ಗಕ್ಕೆ ಯೋಗ್ಯತಾನುಸಾರ ಬಹುಮಾನಕೊಟ್ಟು ಹರಕುಮಾರ ಪರಸ್ಥಳಕ್ಕೆ ಹೋಗಿದ್ದ ಮ್ಯಾಜಿಸ್ಟ್ರೇಟರನ್ನು ಕಾಣಲು ಹೋದನು. ಮ್ಯಾಜಿಸ್ಟ್ರೇಟರು ಅವನ ಬಾಯಿಂದ ಶಶಿಭೂಷಣನ ಎದೆಗಾರಿಕೆಯ ಸುದ್ದಿ ಕೇಳಿ—“ನಾಯಬರು ಬಹಳ ಒಳ್ಳೆಯವರು. ಅವರು ಇಂತಹ ಕೆಲಸ ಮಾಡಿದರೇ ಎಂದೂ ಸಂಗತಿ ನನಗೆ ತಿಳಿಸಿ

ಗುಟ್ಟಾಗಿ ವಿಷಯ ತೀರ್ಮಾನಿಸಿಕೊಳ್ಳದೆ ಒಮ್ಮೆಗೇ ಮೊಕದ್ದಮೆ ಹೂಡು ವುದಾದರೂ ಉಂಟೇ ಎಂದು ನಾನು ಅಚ್ಚರಿಗೊಂಡಿದ್ದೆ. ಈಗ ಎಲ್ಲ ಅರ್ಥ ವಾಯಿತು" ಎಂದರು.

ಕೊನೆಗೆ "ಶಶಿ ಕಾಂಗ್ರೆಸ್ಸಿಗೆ ಸೇರಿದವನೇನು" ಎಂದು ನಾಯಬನನ್ನು ಕೇಳಿದರು ನಾಯಬನು ಅಮ್ಲಾನ ಮುಖದೊಡನೆ "ಹೌದು" ಎಂದನು.

ಸಾಹೇಬರು ತಮ್ಮ ಸಾಹೇಬ ಬುದ್ಧಿಯ ಬಲದಿಂದ ಇದೆಲ್ಲ ಕಾಂಗ್ರೆಸ್ಸಿನ ನಡವಳಿಕೆಯೆಂದು ಸ್ಪಷ್ಟವಾಗಿ ಅರಿತರು. ಏನಾದರೊಂದು ಗೊಂದಲ ಎಬ್ಬಿಸಿ 'ಅಮೃತಬಜಾರ್ ಪತ್ರಿಕೆ'ಗೆ ಬರಹ ಕಳುಹಿಸಿ, ಸರ್ಕಾರದೊಡನೆ ತಂಟೆ ಹೂಡಲು ಕಾಂಗ್ರೆಸ್ಸಿನ ಚಿಕ್ಕ ಪುಟ್ಟ ಶಿಷ್ಯ ಸಂಪ್ರದಾಯದವರು ಗುಟ್ಟಾಗಿ ನಾಲ್ಕು ದಿಕ್ಕಿನಲ್ಲೂ ಒಳಸಂಚು ನಡಸುತ್ತಿರುವರು. ಈ ಬಗೆಯ ಕ್ಷುದ್ರ ಕಂಟಕ ಗಣವನ್ನು ಒಮ್ಮೆಗೆ ಅಡಗಿಸಿಬಿಡಲು ಸರ್ಕಾರದವರು ಮ್ಯಾಜಿ ಸ್ಟ್ರೇಟರಿಗೆ ಹೆಚ್ಚಿನ ಅಧಿಕಾರ ಕೊಟ್ಟಿಲ್ಲವಲ್ಲ ಎಂದೂ, ಇಂಡಿಯಾ ಸರ್ಕಾರ.... ಅತಿ ದುರ್ಬಲ ಸರ್ಕಾರವೆಂದೂ ಸಾಹೇಬರು ಮನಸ್ಸಿನಲ್ಲೇ ಮೂದಲಿಸಿದರು. ಆದರೆ ಕಾಂಗ್ರೆಸ್ಸಿಗೆ ಶಶಿಭೂಷಣನ ಹೆಸರು ಮ್ಯಾಜಿಸ್ಟ್ರೇಟರ ಮನಸ್ಸಿನಲ್ಲಿ ನೆಲೆಗೊಂಡಿತ್ತು.

## ಪಂಚಮ ಪರಿಚ್ಛೇದ

ಪ್ರಪಂಚದಲ್ಲಿ ಮಹಾ ಮಹಾ ಘಟನೆಗಳು ಪ್ರಬಲ ರೀತಿಯಲ್ಲಿ ವೃದ್ಧಿ ಹೊಂದುತ್ತಿರುವ ಕಾಲದಲ್ಲಿ ಸಣ್ಣ ಪುಟ್ಟ ಘಟನೆಗಳೂ ಹಸಿದ ಕ್ಷುದ್ರ ಕೊಂಬೆ ರೆಂಬೆಗಳನ್ನು ಹರಡಿ ಪ್ರಪಂಚದಮೇಲೆ ತಮ್ಮ ಹಕ್ಕನ್ನು ವಿಸ್ತರಿಸುವುದನ್ನು ಬಿಡವು

ಶಶಿಭೂಷಣ ಈ ಮ್ಯಾಜಿಸ್ಟ್ರೇಟರ ವ್ಯಾಜ್ಯದ ವಿಷಯದಲ್ಲಿ ಪೂರ್ಣ ವಾಗಿ ಮುಳುಗಿರುವ ಸಮಯದಲ್ಲಿ, ಪುಸ್ತಕ, ಪತ್ರಗಳಿಂದ ಕಾನೂನು ಕಟ್ಟಳೆ ಗಳನ್ನು ಗುರುತಿಸಿ ಬರೆದಿಡುತ್ತಿದ್ದನು. ಮನಸ್ಸಿನಲ್ಲೇ ತನ್ನ ಹೇಳಿಕೆಗೆ ಸಾಣೆ ಹಿಡಿಯುತ್ತಿದ್ದನು. ಕಲ್ಪನೆಯಲ್ಲಿ ಸಾಕ್ಷಿಗಳ ಬಾಯಿ ಮುಚ್ಚಿಸಿಬಿಟ್ಟಿದ್ದನು. ಬಹಿ ರಂಗವಾದ ಕೋರ್ಟಿನಲ್ಲಿ ಜನಸಮೂಹದ ನೋಟ ಮತ್ತು ಈ ಯುದ್ಧ ಕಾಂಡದ ಮುಂದೆ ನಡೆಯುವ ಅಧ್ಯಾಯ ಇವುಗಳನ್ನು ಮನದಲ್ಲಿ ಊಹಿಸಿ

ಕೊಂಡು ಕ್ಷಣ ಕ್ಷಣಕ್ಕೂ ನಡುನಡುಗಿ ಮೈ ಬೆವರು ತುಂಬಿದವನಾಗುತ್ತಿದ್ದನು. ಆ ಸಮಯದಲ್ಲಿ ಅವನ ಕ್ಷುದ್ರ ಶಿಷ್ಯೆ ತನ್ನ ಹರಕಲು ಬಾಲಬೋಧೆ ಮತ್ತು ಶಾಯಿಯ ಚಿತ್ರಗಳಿಂದ ಅಲಂಕೃತವಾದ ಬರವಣಿಗೆಯ ಪುಸ್ತಕಗಳೊಡನೆ ಒಮ್ಮೊಮ್ಮೆ ತೋಟದಿಂದ ಹಣ್ಣುಗಳು, ತಾಯಿಯ ಉಗ್ರಾಣದಿಂದ ಉಪ್ಪಿನ ಕಾಯಿ, ಒಂದೊಂದು ದಿನ ಕೊಬ್ಬರಿ ಮಿಠಾಯಿ, ಎಂದಾದರೊಂದು ದಿನ ಎಲೆಯಲ್ಲಿ ಸುತ್ತಿ ತಂದ ತಾಳೆಹೂ—ಕುಂಕುಮಕೇಸರಿ ಇವುಗಳಿಂದ ವಾಸನೆ ಕಟ್ಟಿ ಮನೆಯಲ್ಲಿ ಮಾಡಿದ ಕಾಚಿನ ಬಿಲ್ಲೆಗಳನ್ನೋ ಎತ್ತಿಕೊಂಡು ಗೊತ್ತಾದ ವೇಳೆಯಲ್ಲಿ ಅವನ ಕೊಠಡಿಯ ಬಾಗಿಲಿಗೆ ಬಂದು ನಿಲ್ಲುತಿದ್ದಳು.

ಮೊದಲ ಕೆಲದಿನಗಳು ಶಶಿಭೂಷಣ ಬೊಂಬೆಗಳಿಲ್ಲದ ಉಗ್ರಮೂರ್ತಿಯಂತಿದ್ದ ದೊಡ್ಡ ಪುಸ್ತಕ ತೆಗೆದುಕೊಂಡು ಅನ್ಯಮನಸ್ಕನಾಗಿದ್ದುದನ್ನು ನೋಡಿದಾಗ, ಅವನು ಅದರ ಹಾಳೆಗಳನ್ನು ತಿರುವಿಹಾಕುತ್ತಿರುವನೋ ಅಥವಾ ಅದನ್ನು ಮನಸ್ಸಿಟ್ಟು ಓದುತ್ತಿರುವನೋ ಅವಳಿಗೆ ಅರ್ಥವಾಗುತ್ತಿರಲಿಲ್ಲ. ಇತರ ಸಮಯಗಳಲ್ಲಿ ಶಶಿಭೂಷಣ ಯಾವ ಪುಸ್ತಕ ಓದುತಿದ್ದರೂ ಅದರೊಳಗಿನಿಂದ ಯಾವುದಾದರೊಂದು ಅಂಶವನ್ನು ಗಿರಿಬಾಲೆಗೆ ತಿಳಿಸಲು ಯತ್ನಿಸುತ್ತಿದ್ದನು. ಆದರೆ ಆ ಕರಿಯ ರಟ್ಟಿನ ದಪ್ಪ ಹೊಟ್ಟೆಯ ಪುಸ್ತಕದಲ್ಲಿ ಗಿರಿಬಾಲೆಗೆ ತಿಳಿಸಬಹುದಾದ ಒಂದೆರಡು ಮಾತುಗಳೂ ಇಲ್ಲವೇನು? ಹಾಗೆ ಇಲ್ಲದಿದ್ದರೂ ಈ ಪುಸ್ತಕ ಅಷ್ಟು ಹೆಚ್ಚಿನದೇ—ಗಿರಿಬಾಲೆ ಅಷ್ಟು ಅಲ್ಪಳೇನು?

ಪ್ರಾರಂಭದಲ್ಲಿ ಗುರುವಿನ ಗಮನವನ್ನು ಸೆಳೆಯುವುದಕ್ಕಾಗಿ ಸ್ವರವರ್ಣಗಳನ್ನೂ, ಕಾಗುಣಿತವನ್ನೂ ಹೇಳುತ್ತ ಜಡೆಯ ಸಮೇತ ಮೈಯ ಮೇಲ್ಭಾಗವನ್ನು ಕುಲುಕುತ್ತ ಕುಲುಕುತ್ತ ಗಟ್ಟಿಯಾದ ದನಿಯಲ್ಲಿ ತನಗೆ ತಾನೇ ಓದತೊಡಗಿದಳು. ಅದರಿಂದ ಹೆಚ್ಚು ಪ್ರಯೋಜನವಾಗದುದನ್ನು ಕಂಡಳು. ಕರಿಯ ದಪ್ಪ ಪುಸ್ತಕದ ಮೇಲೆ ಮನಸ್ಸಿನಲ್ಲೇ ಬಹಳ ಕೋಪಗೊಂಡಳು. ಅದನ್ನು ಒಬ್ಬ ಕುತ್ಸಿತ ಕಠೋರ ನಿಷ್ಠುರ ವ್ಯಕ್ತಿಯಂತೆ ಕಾಣತೊಡಗಿದಳು. ಈ ಪುಸ್ತಕದ ಒಂದೊಂದು ಹಾಳೆಯೂ ದುಷ್ಟ ಮನುಷ್ಯನಂತೆ ಆಕಾರ ಧರಿಸಿ, ಗಿರಿಬಾಲೆ ಸಣ್ಣ ಹುಡುಗಿಯೆಂದೆಣಿಸಿ, ನೀರಸವಾಗಿ ಅಲಕ್ಷ್ಯದಿಂದ ನೋಡುವಹಾಗೆ ಅವಳಿಗನಿಸಿತು. ಆ ಪುಸ್ತಕವನ್ನು ಯಾವನಾದ

ರೊಬ್ಬ ಕಳ್ಳ ಕದ್ದುದಾದರೆ ಆ ಕಳ್ಳನಿಗೆ ತನ್ನ ತಾಯಿಯ ಉಗ್ರಾಣದಲ್ಲಿರುವ ಸುವಾಸನೆಯ ಕಾಚನ್ನೆಲ್ಲಾ ಇನಾಮಾಗಿ ತಂದುಕೊಡಲು ಸಿದ್ಧವಾಗಿದ್ದಳು. ಆ ಪುಸ್ತಕದ ವಿನಾಶಕ್ಕಾಗಿ ಅವಳು ಮನಸ್ಸಿನಲ್ಲೇ ದೇವರ ಬಳಿ ಅದೆಷ್ಟು ಅಸಂಗತ ಮತ್ತು ಅಸಂಭವ ಪ್ರಾರ್ಥನೆ ಮಾಡಿದ್ದಳೋ, ಅವನ್ನು ದೇವರು ಕೇಳಲಿಲ್ಲ. ಅವನ್ನು ಓದುಗರ ಕಿವಿಗೆ ಹಾಕುವುದರ ಆವಶ್ಯಕತೆಯೂ ಇಲ್ಲ.

ಆಗ ನೊಂದ ಮನದ ಆ ಹುಡುಗಿ ಒಂದೆರಡು ದಿನ ಬಾಲಬೋಧೆ ಯೊಡನೆ ಗುರುವಿನ ಮನೆಗೆ ಹೋಗುವುದನ್ನು ನಿಲ್ಲಿಸಿದಳು. ಆಮೇಲೆ ಈ ವಿಚ್ಛೇದದ ಫಲ ನೋಡುವ ಉದ್ದೇಶದಿಂದ ಅವಳು ಮತ್ತಾವುದೋ ನೆಪ ಮಾಡಿಕೊಂಡು ಶಶಿಭೂಷಣನ ಮನೆಯ ಇದಿರಿಗೆ ಬಂದು ನಿಂತು ಇಣಿಕಿ ನೋಡಲು ಶಶಿಭೂಷಣ ಆ ಕರಿಯ ರಟ್ಟಿನ ದಪ್ಪ ಪುಸ್ತಕವನ್ನು ದೂರ ಬಿಸುಟು ಒಂಟಿಯಾಗಿ ನಿಂತುಕೊಂಡು ಕೈಗಳನ್ನು ಅಲುಗಿಸುತ್ತ ಕಿಟಕಿಯ ಸಲಾಕಿಗಳನ್ನುದ್ದೇಶಿಸಿ ವಿಜಾತಿಯ ಭಾಷೆಯಲ್ಲಿ ಉಪನ್ಯಾಸಮಾಡುತ್ತಿದ್ದು ದನ್ನು ಕಂಡಳು. ನ್ಯಾಯಮೂರ್ತಿಗಳ ಮನಸ್ಸನ್ನು ಕರಗಿಸಿಬಿಡಬೇಕೆಂಬು ದನ್ನು ಈ ಕಬ್ಬಿಣದ ಸಲಾಕೆಯ ಮೇಲೆ ಪ್ರಯೋಗಿಸಿ ಪರೀಕ್ಷೆ ಮಾಡು ತ್ತಿದ್ದನೇನೋ. ಪ್ರಪಂಚದ ಅನುಭವವಿಲ್ಲದ ಶಶಿಭೂಷಣನಿಗೆ ಹಿಂದಿನ ಕಾಲದಲ್ಲಿ ಡಿಮಾಸ್ಥನೀಸ್, ಸಿಸಿರೊ, ಬರ್ಕ್, ಷೆರಿಡನ್, ಮೊದಲಾದ ವಾಂಗ್ಮಿಗಳು ವಾಕ್ಯಬಲದಿಂದ ಅದೆಂತಹ ಅಸಾಮಾನ್ಯ ಕೆಲಸಗಳನ್ನು ಮಾಡಿ ಹೋಗಿರುವರು. ಯಾವ ವಿಧದಲ್ಲಿ ಶಬ್ದಭೇದೀ ಬಾಣಗಳನ್ನು ಸುರಿಸಿ ಅನ್ಯಾಯವನ್ನು ತುಂಡು ತುಂಡು ಮಾಡಿ ಅತ್ಯಾಚಾರವನ್ನು ನಾಚಿಕೆಗೊಳಿಸಿ ಅಹಂಕಾರವನ್ನು ನೆಲಸಮ ಮಾಡಿದ್ದರು. ಇಂದಿನ ವರ್ತಕ ಯುಗದಲ್ಲೂ ಅವೆಲ್ಲ ಅಸಂಭವವಲ್ಲವೆಂದು ಎಣಿಕೆಯಿತ್ತು. ಆಳುವವರೆಂಬ ಅಹಂಕಾರದಿಂದ ಕೊಬ್ಬಿದ ಉದ್ಧತ ಆಂಗ್ಲರನ್ನು ಯಾವ ವಿಧದಲ್ಲಿ ತಾನು ಜಗತ್ತಿನಿದಿರಿನಲ್ಲಿ ನಾಚಿಸಿ ಪಶ್ಚಾತ್ತಾಪಪಡಿಸುವೆನೆಂಬುದನ್ನು ತಿಲ್‌ಕೂಚೀ ಗ್ರಾಮದ ಸಣ್ಣ ಮುರುಕು ಮನೆಯ ಕೋಣೆಯಲ್ಲಿ ಕುಳಿತು ಯೋಚನೆಮಾಡುತ್ತಿದ್ದನು. ಇವನ ಆಲೋಚನೆ ಕೇಳಿ ಆಕಾಶದ ದೇವತೆಗಳು ನಕ್ಕರೋ, ಇಲ್ಲವೆ ಕಣ್ಣೀರು ಸುರಿಸಿದರೋ, ಯಾರೂ ಹೇಳಲಾರರು.

ಗಿರಿಬಾಲೆ ಅಂದು ಅವನ ದೃಷ್ಟಿಗೆ ಬೀಳಲೇ ಇಲ್ಲ. ಅಂದು ಹುಡುಗಿಯ ಸೆರಗಿನಲ್ಲಿ ನೇರಳೆ ಹಣ್ಣಿರಲಿಲ್ಲ ಹಿಂದೊಮ್ಮೆ ನೇರಳೆಯು ಬೀಜ ಪತ್ತೆಯಾದಾಗಿನಿಂದ ಆ ಹಣ್ಣಿನ ವಿಷಯದಲ್ಲಿ ಅವಳು ಬಹಳ ಸಂಕೋಚಗೊಂಡಿದ್ದಳು. ಹೆಚ್ಚೇಕೆ—ಶಶಿಭೂಷಣ ಎಂದಾದರೂ ಸಾಮಾನ್ಯ ರೀತಿಯಲ್ಲಿ "ಗಿರಿ ಇಂದು ನೇರಳೆ ಹಣ್ಣಿಲ್ಲವೇ?" ಎಂದು ಕೇಳಿದರೆ, ಅವಳು ಅದನ್ನು ಗೂಢ ಅಪಹಾಸ್ಯವಾಗಿ ಎಣಿಸಿ, 'ಹೋಗು' ಎಂದು ಗದರಿಸಿ ಓಡಲೆತ್ನಿಸುತ್ತಿದ್ದಳು. ನೇರಳೆಯ ಬೀಜವಿಲ್ಲದ ಕಾರಣ ಇಂದು ಅವಳು ಬೇರೊಂದು ತಂತ್ರವನ್ನು ಅವಲಂಬಿಸಬೇಕಾಯಿತು. ಇದ್ದಕ್ಕಿದ್ದ ಹಾಗೆ ದೂರದೆಡೆಗೆ ದೃಷ್ಟಿಬೀರಿ ಹೆಣ್ಣು ಗಟ್ಟಿಯಾದ ದನಿಯಲ್ಲಿ—ಸ್ವರ್ಣಾ, ತಂಗೀ ನೀನು ಹೋಗಬೇಡ ನಾನು ಈಗಲೇ ಬರುತ್ತೇನೆ—ಎಂದಳು.

ಈ ಮಾತುಗಳು ಸ್ವರ್ಣಲತೆಯೆಂಬ ಹೆಸರಿನ ದೂರದಲ್ಲಿರುವ ಯಾವಳೋ ಒಬ್ಬ ಸಂಗಡಿಗಳನ್ನು ಉದ್ದೇಶಿಸಿ ಎಂದು ಪುರುಷ ಪಾಠಕರು ಎಣಿಸಬಹುದು. ಆದರೆ ದೂರದಲ್ಲಿ ಯಾರೂ ಇರಲಿಲ್ಲವೆಂಬುದನ್ನೂ, ಗುರಿ ಸಮೀಪದಲ್ಲಿತ್ತೆಂಬುದನ್ನೂ ಪಾಠಕಿಯರು ಬಲ್ಲರು ಆದರೆ ಪಾಪ ಕುರುಡನ ಮೇಲೆ ಆ ಬಾಣ ಗುರಿತಪ್ಪಿತು. ಶಶಿಭೂಷಣ ಕೇಳಲಾರದೆ ಹೋದನೆಂದಲ್ಲ; ಹುಡುಗಿ ನಿಜವಾಗಿಯೂ ಆಟದಲ್ಲಿ ಆಸಕ್ತಳಾಗಿರುವಳೆಂದೂ ಎಣಿಸಿದನು. ಅಂದು ಅವಳನ್ನು ಆಟದಿಂದ ಓದಿಗೆ ಎಳೆಯಲು ಅವನಿಗೆ ಮನಸಾಗಲಿಲ್ಲ. ಯಾಕೆಂದರೆ, ಅವನೂ ಅಂದು ಯಾವ ಯಾವ ಹೃದಯಗಳನ್ನೋ ಉದ್ದೇಶಿಸಿ ಬಾಣಗಳನ್ನು ಗುರಿ ಇಡುತ್ತಿದ್ದನು. ಹುಡುಗಿಯ ಪುಟ್ಟ ಕೈಗಳ ಸಾಮಾನ್ಯ ಬಾಣ ಗುರಿ ತಪ್ಪುತಿದ್ದಂತೆ ಕಲಿತವನಾದ ಅವನ ಕೈಯ ಬಾಣಗಳೂ ಗುರಿ ತಪ್ಪಿದ್ದವು. ಈ ಸಂಗತಿ ಪಾಠಕರು ಹಿಂದೆಯೇ ಅರಿತಿರುವರು.

ನೇರಳೆಯ ಬೀಜದಲ್ಲಿರುವ ಗುಣವೇನೆಂದರೆ ಒಂದೊಂದಾಗಿ ಹಲವನ್ನು ಎಸೆಯಬಹುದು. ನಾಲ್ಕು ವ್ಯರ್ಥವಾದರೆ ಕೊನೆಗೆ ಐದನೆಯದಾದರೂ ಸರಿಯಾದ ಎಡೆಗೆ ಹೋಗಿ ತಗಲಬಹುದು. ಆದರೆ ಸ್ವರ್ಣ ಸಾವಿರ ಕಲ್ಪನೆಯ ಫಲವಾದರೂ ಅವಳಿಗೆ "ಇದೋ ಬಂದೆ" ಎಂದು ಹೇಳಿ ಹೆಚ್ಚು ಹೊತ್ತು ನಿಂತಿರಲು ಸಾಧ್ಯವಿಲ್ಲ. ಹಾಗೆ ನಿಂತಿದ್ದರೆ ಸ್ವರ್ಣಳ ವಾಸ್ತವತೆಯ ವಿಷಯದಲ್ಲಿ ಜನರಿಗೆ ಸ್ವಭಾವವಾಗಿಯೇ ಸಂದೇಹ ಉಂಟಾಗಬಹುದು. ಈ

ಉಪಾಯ ಸಂಪೂರ್ಣ ವ್ಯರ್ಥವಾಗಲು ಗಿರಿಬಾಲೆ ಬೇಗನೆ ಹೊರಟುಹೋಗ ಬೇಕಾಯಿತು. ಆದರೂ ಸ್ವರ್ಣಮಯಿಾ ಎಂಬ ಹೆಸರಿನ ದೂರ ನಿಂತಿರುವ ಸಂಗಡಿಗಳೊಡನೆ ಸೇರಲು ಬಯಕೆಯುಂಟಾದರೆ ಹ್ಯಾಗೆ ವೇಗವಾಗಿ ಉತ್ಸಾಹ ದೊಡನೆ ಹೆಜ್ಜೆಹಾಕುವುದು ಸ್ವಭಾವವೋ ಆ ಭಾವನೆ ಗಿರಿಬಾಲೆಯ ನಡಗೆ ಯಲ್ಲಿ ಕಾಣಬರಲಿಲ್ಲ ಅವಳು ತನ್ನ ಹಿಂದೆ ಯಾರಾದರೂ ಬರುತ್ತಿರುವರೋ ಎಂದು ಅರಿಯಲು ತನ್ನ ಹಿಂಭಾಗವನ್ನು ನೋಡಲು ಪ್ರಯತ್ನಿಸುತ್ತಿದ್ದಳು. ಯಾರೂ ಬರುತ್ತಿಲ್ಲವೆಂಬುದನ್ನು ಖಂಡಿತ ಅರಿತಾಗ, ಯಾರನ್ನೂ ಕಾಣದೆ ಹೋದಾಗ, ಅವಳು ತನ್ನ, ಆ ಕ್ಷುದ್ರ ಆಶೆಯನ್ನೂ ಹರಕಲು ಬಾಲಬೋಧೆ ಯನ್ನೂ ಚೂರುಚೂರು ಮಾಡಿ ಹಾದಿಯಲ್ಲಿ ಎರಚಿಬಿಟ್ಟಳು. ಶಶಿಭೂಷಣ ಅವಳಿಗೆ ಕಲಿಸಿದ್ದ ವಿದ್ಯೆಯನ್ನು ಅವಳೇನಾದರೂ ಹಿಂದಿರುಗಿಸುವುದು ಸಾಧ್ಯ ವಾಗುವುದಾಗಿದ್ದರೆ ನೇರಳೆಯ ಬೀಜಗಳಂತೆ ಎಲ್ಲವನ್ನೂ ಶಶಿಭೂಷಣನ ಮನೆಯ ಬಾಗಿಲಲ್ಲಿ ಸದ್ದಿನೊಡನೆ ಎಸೆದು ಬರುತ್ತಿದ್ದಳು. ಮತ್ತೆ ಶಶಿ ಭೂಷಣನನ್ನು ನೋಡುವ ಮುಂಚೆಯೇ ಅವಳು ತಾನು ಕಲಿತದ್ದನ್ನೆಲ್ಲಾ ಸಂಪೂರ್ಣವಾಗಿ ಮರೆತುಬಿಡುವುದಾಗಿ ಪಣತೊಟ್ಟಳು. ಅವನು ಕೇಳುವ ಪ್ರಶ್ನೆಗಳಲ್ಲಿ ಒಂದಕ್ಕಾದರೂ ಉತ್ತರ ಕೊಡೆನು. ಒಂದೇ ಒಂದಕ್ಕೂ ಇಲ್ಲ ಆಗ ಶಶಿಭೂಷಣ ಸಂಪೂರ್ಣವಾಗಿ ಸೋಲುವನು ಎಂದು ಅಂದುಕೊಂಡನು.

ಗಿರಿಬಾಲೆಯ ಕಣ್ಣುಗಳೆರಡರಲ್ಲೂ ನೀರು ಉಕ್ಕಿಬಂದಿತು. ಕಲಿತು ದನ್ನು ಮರೆತುಬಿಟ್ಟರೆ ಶಶಿಭೂಷಣನಿಗೆ ಅದೆಷ್ಟು ತೀವ್ರ ಅನುತಾಪವಾಗ ಬಹುದೆಂಬುದನ್ನು ನೆನಪುಮಾಡಿಕೊಂಡು, ಅವಳ ನೊಂದ ಮನಕ್ಕೆ ಸ್ವಲ್ಪ ನೆಮ್ಮದಿಯುಂಟಾಯಿತು. ಶಶಿಭೂಷಣನ ತಪ್ಪಿನ ಫಲವಾಗಿ ಕಲಿತದ್ದನ್ನು ಮರೆತ ಭವಿಷ್ಯತ್ತಿನ ಆ ನಿರ್ಭಾಗ್ಯ ಗಿರಿಬಾಲೆಯನ್ನು ಊಹಿಸಿಕೊಂಡು ಅವಳಿಗೆ ತನ್ನ ವಿಷಯಲ್ಲಿ ಮರುಕವುಂಟಾಯಿತು. ಆಕಾಶದಲ್ಲಿ ಮೋಡ ಕೂಡಿತ್ತು. ಮಳೆಗಾಲದಲ್ಲಿ ನಿತ್ಯವೂ ಹೀಗೆ ಮೋಡ ಕೂಡುತ್ತಿತ್ತು. ಗಿರಿಬಾಲೆ ಹಾದಿಯ ಅಂಚಿನ ಮರವೊಂದರ ಅಡಿಯಲ್ಲಿ ನಿಂತು ದುಗುಡದಿಂದ ಬಿಕ್ಕಿಬಿಕ್ಕಿ ಅಳತೊಡಗಿದಳು. ಈ ಬಗೆಯ ನಿಷ್ಕಾರಣ ಅಳುವನ್ನು ನಿತ್ಯ ಎಷ್ಟೋಂದು ಹುಡುಗಿಯರು ಅಳುತ್ತಿರುವರು. ಇವುಗಳಲ್ಲಿ ಗಮನಿಸಬೇಕಾದುದು ಏನೂ ಇಲ್ಲ.

## ಷಷ್ಠ ಪರಿಚ್ಛೇದ

ಶಶಿಭೂಷಣನ ಕಾನೂನು ಸಂಬಂಧವಾದ ಸಂಶೋಧನೆ ಮತ್ತು ವಾದ ವಿವಾದ ಏತಕ್ಕಾಗಿ ವ್ಯರ್ಥವಾಯಿತೆಂಬುದು ಪಾಠಕರಿಗೆ ಅಗೋಚರವಾಗಿಲ್ಲ. ಮ್ಯಾಜಿಸ್ಟ್ರೇಟರ ಹೆಸರಿನಲ್ಲಿ ಹೂಡಿದ್ದ ವ್ಯಾಜ್ಯ ಇದ್ದಕ್ಕಿದ್ದಂತೆ ತೀರ್ಮಾನವಾಗಿಬಿಟ್ಟಿತು. ಹರಕುಮಾರರು ತಮ್ಮ ಜಿಲ್ಲೆಯ ಬೆಂಚ್ ಕೋರ್ಟಿನಲ್ಲಿ ಆನರರಿ ಮ್ಯಾಜಿಸ್ಟ್ರೇಟಾದರು. ಹಳೆಯದಾದೊಂದು ನಿಲುವಂಗಿ ಮತ್ತು ರುಮಾಲು ತೊಟ್ಟು ಆತ ಬಹುಮಟ್ಟಿಗೆ ದಿನ ತಪ್ಪದೆ ಜಿಲ್ಲಾ ಕಛೇರಿಗೆ ಹೋಗಿ ಸಾಹೇಬರುಗಳಿಗೆ ಪದ್ಧತಿಯ ಸಲಾಮು ಸಲ್ಲಿಸಿ ಬರುತ್ತಿದ್ದರು.

ಶಶಿಭೂಷಣನ ಆ ಕರಿಯ ರಟ್ಟಿನ ದಪ್ಪ ಪುಸ್ತಕದ ವಿಷಯದಲ್ಲಿ ಗಿರಿಬಾಲೆಯ ಶಾಪ ಇಷ್ಟು ದಿನಗಳ ಅನಂತರ ಫಲಿಸತೊಡಗಿತು. ಅದೊಂದು ಕತ್ತಲೆಯ ಕೋಣೆಯಲ್ಲಿ ಗಡೀಪಾರಾಗಿ ಅನಾದರದ ಮರವೆಗೆ ಗುರಿಯಾಗಿ ಧೂಳರಾಶಿಯನ್ನು ಸಂಗ್ರಹಿಸತೊಡಗಿತು. ಆದರೆ ಆ ಅನಾದರ ನೋಡಿ ಆನಂದಪಡುವ ಆ ಹೆಣ್ಣು ಗಿರಿಬಾಲೆಯೆಲ್ಲಿ?

ಶಶಿಭೂಷಣ ಎಂದು ಕಾನೂನಿನ ಪುಸ್ತಕವನ್ನು ಮುಚ್ಚಿಟ್ಟು ತೆಪ್ಪನೆ ಕುಳಿತನೋ, ಅಂದೇ ಗಿರಿಬಾಲೆ ಬರಲಿಲ್ಲವೆಂಬುದು ಅವನಿಗೆ ಅರಿವಾಯಿತು. ಆಗ ಒಂದೊಂದಾಗಿ ಹಿಂದಿನ ಕೆಲದಿನಗಳ ಸಂಗತಿ ನೆನಪಾಯಿತು. ಒಂದು ದಿನ ಉಜ್ವಲ ಪ್ರಭಾತದಲ್ಲಿ ಗಿರಿಬಾಲೆ ಸೆರಗು ತುಂಬ ಮೊದಲ ಮಳೆಯಲ್ಲಿ ತೊಯ್ದ ವಕುಳಪುಷ್ಪ ತಂದಿದ್ದುದು ನೆನಪಾಯಿತು. ಅವಳನ್ನು ಕಂಡೂ ಅವನು ಪುಸ್ತಕದಿಂದ ತಲೆಯೆತ್ತಲಿಲ್ಲ. ಆಗ ಅವಳು ನಿಟ್ಟುಸಿರುಬಿಟ್ಟು ತನ್ನ ಸೆರಗಿಗೆ ಚುಚ್ಚಿದ್ದ ಸೂಜಿಯೊಡನೆ ದಾರ ತೆಗೆದು ತಲೆ ತಗ್ಗಿಸಿಕೊಂಡು ಒಂದೊಂದು ಹೂವಾಗಿ ಮಾಲೆ ಪೋಣಿಸತೊಡಗಿದಳು—ಮಾಲೆಯನ್ನು ಬಹಳ ನಿಧಾನವಾಗಿ ಪೋಣಿಸಿದಳು;—ಬಹಳ ಹೊತ್ತಿನಮೇಲೆ ಸಿದ್ಧವಾಯಿತು. ಹೊತ್ತಾಯಿತು. ಗಿರಿಬಾಲೆ ಮನೆಗೆ ಹಿಂದಿರುಗುವ ಹೊತ್ತಾಯಿತು. ಆದರೂ ಶಶಿಭೂಷಣನ ಓದು ಮುಗಿಯಲಿಲ್ಲ. ಗಿರಿಬಾಲೆ ಮಾಲೆಯನ್ನು ಹಲಗೆಯ ಮಂಚದಮೇಲಿಟ್ಟು ಮೆಲ್ಲಮೆಲ್ಲನೆ ಹೊರಟುಹೋದಳು. ಅವಳ ದುಗುಡ ದಿನ ದಿನಕ್ಕೆ ಹೇಗೆ ಬೆಳೆಯಿತೆಂಬುದು ಅವನಿಗೆ ನೆನಪಾಯಿತು. ಯಾವಾಗಲಿಂದ ಅವಳು ಅವನ ಕೋಣೆಯೊಳಕ್ಕೆ ಬರದೆ ಹೊರಗೆ ಮನೆಯ

ಮುಂದೆ ರಸ್ತೆಯಲ್ಲಿ ಕಾಣಿಸಿಕೊಂಡು ಹೊರಟುಹೋಗುತ್ತಿದ್ದಳು, ಕೊನೆಗೆ ಯಾವ ಕಾಲದಿಂದ ಹುಡುಗಿ ಆ ಮಾರ್ಗದಲ್ಲಿ ಬರುವುದನ್ನೇ ಬಿಟ್ಟುಬಿಟ್ಟಳು ಎಂಬುದು ನೆನವಾಯಿತು ಗಿರಿಬಾಲೆಯ ಮುನಿಸು ಹೆಚ್ಚು ದಿನ ನಿಲ್ಲುವಂಥಾದ್ದಲ್ಲವಲ್ಲ. ಶಶಿಭೂಷಣ ನಿಟ್ಟುಸಿರುಬಿಟ್ಟು ಮುಂದುಗಾಣದ ಕೆಲಸ ಮಾಡಲಾರದವನಂತೆ ಗೋಡೆ ಒರಗಿಕೊಂಡು ಕುಳಿತಿದ್ದನು. ಪುಟ್ಟ ವಿದ್ಯಾರ್ಥಿನಿ ಬರದ ಕಾರಣ ಆವನ ಪಠ್ಯಪುಸ್ತಕಗಳು ನೀರಸವಾಗಿ ತೋರಿದುವು ಪುಸ್ತಕಗಳನ್ನು ಎಳೆದು ತಿರುವಿಹಾಕಿ ನಾಲ್ಕಾರು ಹಾಳೆ ಓದಿ ಪುನಃ ಹಾಗೆಯೇ ಇಟ್ಟು ಬಿಡುತ್ತಿದ್ದನು. ಬರೆಯುತ್ತ ಬರೆಯುತ್ತ ಘಳಿಗೆಗೊಮ್ಮೆ ಹಾದಿಯ ಕಡೆ ಬಾಗಿಲ ಕಡೆ ಪ್ರತೀಕ್ಷೆಯಿಂದ ತುಂಬಿದ ನೋಟ ಬೀರುತ್ತ ಬರೆಯುತ್ತಿದ್ದನು.

ಗಿರಿಬಾಲೆಗೆ ಅಸೌಖ್ಯವುಂಟಾಗಿರಬಹುದೆಂದು ಶಶಿಭೂಷಣನಿಗೆ ಶಂಕೆಯುಂಟಾಯಿತು. ಗುಟ್ಟಾಗಿ ವಿಚಾರಿಸಿ ತನ್ನ ಶಂಕೆಗೆ ಆಧಾರವಿಲ್ಲವೆಂದು ಅರಿತನು. "ಗಿರಿಬಾಲೆ ಈಗೀಗ ಮನೆಯಿಂದ ಹೊರಗೆ ಬರುತ್ತಿರಲಿಲ್ಲ. ಅವಳಿಗೆ ಗಂಡು ನಿಶ್ಚಯವಾಗಿದೆ" ಎಂದು ತಿಳಿಯಿತು.

ಗಿರಿಬಾಲೆ ಬಾಲಬೋಧೆಯ ಹಾಳೆಗಳನ್ನು ಹರಿದು ಕೆಸರಾದ ಹಳ್ಳಿಯ ಹಾದಿಯಲ್ಲಿ ಬಿಸುಟು ಮನೆಗೆ ಹಿಂದಿರುಗಿದ ಮರುದಿನ ಮುಂಜಾನೆಯಲ್ಲಿ ಸೆರಗಿನಲ್ಲಿ ವಿಚಿತ್ರ ಬಹುಮಾನ ಸಂಗ್ರಹಿಸಿಕೊಂಡು ವೇಗವಾದ ನಡೆಯಲ್ಲಿ ಮನೆಯಿಂದ ಹೊರಗೆ ಬರುತ್ತಿದ್ದಳು. ಬಹಳ ಸೆಕೆಯಾಗಿದ್ದ ಕಾರಣ ನಿದ್ರೆಯಿಲ್ಲದೆ ರಾತ್ರಿ ಕಳೆದು ಹರಕುಮಾರ ಬೆಳಗಿನ ಝಾವದಿಂದ ಜಗುಲಿಯ ಮೇಲೆ ಕುಳಿತು ತಂಬಾಕು ಸೇದುತ್ತಿದ್ದನು. 'ಎಲ್ಲಿಗೆ ಹೊರಟೆ?' ಎಂದು ಗಿರಿಯನ್ನು ಕೇಳಿದನು. 'ಶಶಿ ಅಣ್ಣನ ಮನೆಗೆ' ಎಂದು ಗಿರಿ ಉತ್ತರ ಕೊಟ್ಟಳು. ಹರಕುಮಾರ ಗದರಿಸಿ 'ಶಶಿ ಅಣ್ಣನ ಮನೆಗೆ ಹೋಗಬೇಕಾದ ಆವಶ್ಯಕತೆ ಇಲ್ಲ ಒಳಗೆ ನಡೆ' ಎಂದು ಹೇಳಿ ಮಾವನ ಮನೆಗೆ ಹೋಗಲು ತಕ್ಕ ವಯಸ್ಸಾದ ಹುಡುಗಿಗೆ ನಾಚಿಕೆಯಿಲ್ಲದುದನ್ನು ಕುರಿತು ಬೇಕಾದಷ್ಟು ಕೂಗಾಡಿದನು. ಅಂದಿನಿಂದಲೇ ಅವಳು ಹೊರಗೆ ಓಡಾಡುವುದು ನಿಂತಿತು. ಆಗ ಅವಳ ಮುನಿಸು ತಣಿಸಲು ಅವಕಾಶ ಸಿಕ್ಕಲಿಲ್ಲ. ಮಾವಿನಕಾಯಿ ಬಾಳಕ, ವಾಸನೆ ಕಟ್ಟಿದ ಕಾಚು, ಮತ್ತು ನಿಂಬೆಕಾಯಿ ಉಪ್ಪಿನಕಾಯಿ ಇವು ಯಥಾಸ್ಥಾನ ಸೇರಿದುವು. ಮಳೆ ಹೊಯ್ಯತೊಡಗಿತು. ಬಕುಲಪುಷ್ಪ

ಉದುರತೊಡಗಿತು, ಮರದ ತುಂಬ ನಿಂಬೆಯ ಹಣ್ಣು ಕಳಿತು ಜೋಲಾಡು ತಿದ್ದುವು ಹಕ್ಕಿಗಳು ಕಚ್ಚಿ ಹಾಕಿದ, ಗಾಳಿಗೆ ರೆಂಬೆ ಅಲುಗಿ ಉದುರಿದ ನೇರಳೇ ಹಣ್ಣುಗಳು ಮರದ ಕೆಳಗೆ ನಿತ್ಯ ರಾಶಿಯಾಗತೊಡಗಿತು. ಪಾಪ, ಆ ಹರಕು ಬಾಲಬೋಧೆಯೂ ಉಳಿದಿರಲಿಲ್ಲ.

## ಸಪ್ತಮ ಪರಿಚ್ಛೇದ

ಗ್ರಾಮದಲ್ಲಿ ಗಿರಿಬಾಲೆಯ ಮದುವೆಯ ಸಂದರ್ಭದಲ್ಲಿ ಸಾನಾಯಿ ವಾದ್ಯ ಬಾಜಿಸುತ್ತಿದ್ದ ಕಾಲದಲ್ಲಿ ಮದುವೆಗೆ ಕರೆ ಬರದ ಶಶಿಭೂಷಣ ಬಾಡಿಗೆ ದೋಣಿ ಹತ್ತಿ ಕಲ್ಕತ್ತೆಯ ಕಡೆಗೆ ಹೋಗುತಿದ್ದನು.

ಮೊಕದ್ದಮೆ ಹಿಂದಕ್ಕೆ ತೆಗೆದುಕೊಂಡಾಗಿನಿಂದ ಹರಕುಮಾರ ಶಶಿಯನ್ನು ವಿಷದೃಷ್ಟಿಯಿಂದ ನೋಡುತಿದ್ದ. ಕಾರಣವೇನೆಂದರೆ, ಶಶಿ ತನ್ನನ್ನು ಮನಸ್ಸಿನಲ್ಲೇ ಧಿಕ್ಕರಿಸುವನೆಂದೇ ಅವನು ತೀರ್ಮಾನಿಸಿದ್ದನು. ಶಶಿಯ ಮುಖಭಾವ, ನೋಟ, ನಡವಳಿಕೆ ಎಲ್ಲದರಲ್ಲೂ ಆತ ಸಾವಿರಾರು ಕಾಲ್ಪನಿಕ ಉದಾಹರಣೆ ಕಾಣತೊಡಗಿದನು ಗ್ರಾಮದ ಎಲ್ಲ ಜನರೂ ತನ್ನ ಅವಮಾನದ ಸಂಗತಿ ಮರೆತಿರುವರು. ಕೇವಲ ಶಶಿಭೂಷಣನೊಬ್ಬ ಅದನ್ನು ಅಡಿಗಡಿಗೆ ನೆನಪು ಮಾಡಿಕೊಡುತ್ತಿರುವನು ಎಂದು ಆತ ಅವನನ್ನು ಕಣ್ಣೆತ್ತಿ ನೋಡಲಾರದಿದ್ದನು ಅವನನ್ನು ಕಂಡಕೂಡಲೆ ಆತನ ಅಂತಃಕರಣದಲ್ಲಿ ನಾಚಿಕೆಯಿಂದ ಕೂಡಿದ ಸಂಕೋಚ ಮತ್ತು ಸಂಗಡಲೇ ಪ್ರಬಲ ಆಕ್ರೋಶದ ಸಂಚಾರವಾಗುತಿತ್ತು. ಶಶಿಯನ್ನು ಗ್ರಾಮದಿಂದ ಹೊರದೂಡಬೇಕು ಎಂದು ಹರಕುಮಾರ ಪಣತೊಟ್ಟನು.

ಶಶಿಭೂಷಣನಂತಹ ವ್ಯಕ್ತಿಯನ್ನು ಗ್ರಾಮ ಬಿಟ್ಟು ಹೊರಡಿಸುವುದು ಅಂತಹ ಅಸಾಧ್ಯ ಪ್ರಸಂಗವಲ್ಲ ನಾಯಬ್ ಮಹಾಶಯರ ಅಭಿಪ್ರಾಯ ಅತ್ಯಲ್ಪ ಅವಧಿಯಲ್ಲಿ ಸಫಲವಾಯಿತು. ಒಂದು ದಿನ ಬೆಳಗ್ಗೆ ಪುಸ್ತಕದ ಹೊರೆ ಮತ್ತು ನಾಲ್ಕಾರು ತವರದ ಪೆಟ್ಟಿಗೆಗಳನ್ನು ಸಂಗಡ ತೆಗೆದುಕೊಂಡು ಶಶಿ ದೋಣಿ ಹತ್ತಿದನು. ಗ್ರಾಮದೊಡನೆ ಅವನಿಗೆ ಇದ್ದ ಸುಕೋಮಲ ಬಂಧನ ಇಂದು ಕೋಲಾಹಲದೊಡನೆ ಬೇರೆಯಾಗುತಿತ್ತು. ಸುಕೋಮಲ ಬಂಧನ ಅದೆಷ್ಟು ದೃಢವಾಗಿ ಆತನ ಹೃದಯವನ್ನು ಆವರಿಸಿತ್ತೆಂಬುದನ್ನು

ಅವನು ಹಿಂದೆಂದೂ ಪೂರ್ತಿಯಾಗಿ ಅರಿಯಲವಕಾಶವಾಗಲಿಲ್ಲ ಇಂದು ದೋಣಿ ಹೊರಟನಂತರ ಗ್ರಾಮದ ಮರದ ತುದಿ ಅಸ್ಪಷ್ಟವಾಗಿ ಕಾಣತೊಡಗಿದಾಗ, ಉತ್ಸವದ ವಾದ್ಯಧ್ವನಿ ಕ್ಷೀಣವಾಗಿ ಕೇಳತೊಡಗಿದಾಗ, ಆಗ ಇದ್ದಕ್ಕಿದ್ದಂತೆ ಕಣ್ಣೀರಿಂದ ಎದೆ ಬಿರಿಯತೊಡಗಿ ಕೊರಲು ಬಿಗಿದುಬಂದಿತು. ರಕ್ತದ ಓಟದ ವೇಗದಿಂದ ಕೆನ್ನೆಯ ನರಗಳು ಚುಮುಗುಟ್ಟತೊಡಗಿದವು. ವಿಶಾಲ ಪ್ರಪಂಚದ ಎಲ್ಲ ನೋಟ ನೆರಳಿನಿಂದ ನಿರ್ಮಿತವಾದ ಮಾಯೆಯ ಬಿಸಿಲ್ಗುದುರೆಯಂತೆ ಅತ್ಯಂತ ಅಸ್ಪಷ್ಟವಾಗಿ ತೋರತೊಡಗಿತು.

ಇದಿರು ಗಾಳಿ ಅತಿವೇಗವಾಗಿ ಬೀಸುತಿತ್ತು. ಅದರಿಂದಲೇ ಹೊಳೆಯ ಓಟ ಅನುಕೂಲವಾಗಿದ್ದರೂ ದೋಣಿ ಮೆಲ್ಲಮೆಲ್ಲನೆ ಮುಂದುವರಿಯುತಿತ್ತು. ಈ ಸಮಯದಲ್ಲಿ ನದಿಯ ಮಧ್ಯೆ ಶಶಿಭೂಷಣನ ಪ್ರಯಾಣಕ್ಕೆ ವಿಘ್ನವಾದೊಂದು ಘಟನೆ ಸಂಭವಿಸಿತು.

ಸ್ಟೇಷನ್ನಿನ ಘಟ್ಟದಿಂದ ಜಿಲ್ಲೆಯ ಮುಖ್ಯ ಪಟ್ಟಣದವರೆಗೆ ಹೊಸದೊಂದು ಸ್ಟೀಮರ್ ಲೈನ್ ಈಗೀಗ ಆರಂಭವಾಗಿತ್ತು. ಆ ಸ್ಟೀಮರು ಶಬ್ದದೊಡನೆ ಪಕ್ಷಗಳನ್ನು ಆಡಿಸಿಕೊಂಡು ಅಲೆಯೆಬ್ಬಿಸಿಕೊಂಡು ಬರುತಿತ್ತು. ಜಹಜಿನಲ್ಲಿ ಹೊಸ ಲೈನಿನ ಎಳೆವಯಸ್ಸಿನ ಮ್ಯಾನೇಜರ್ ಸಾಹೇಬ ಮತ್ತು ಅಲ್ಪಸಂಖ್ಯೆಯ ಪ್ರಯಾಣಿಕರೂ ಇದ್ದರು. ಪ್ರಯಾಣಿಕರಲ್ಲಿ ಶಶಿಭೂಷಣನ ಗ್ರಾಮದಿಂದಲೂ ಒಬ್ಬಿಬ್ಬರು ಇದ್ದರು.

ಒಬ್ಬ ವರ್ತಕನ ದೋಣಿ ಕೊಂಚದೂರದಿಂದ ಈ ಹಡಗಿನ ಸಂಗಡ ಮೇಲಾಟವಾಡುತ್ತ ಮುಂದುವರಿಯಲು ಯತ್ನಿಸುತಿತ್ತು. ಒಮ್ಮೊಮ್ಮೆ ಹಡಗನ್ನು ಹಿಡಿಯುತಿತ್ತು. ಅಷ್ಟರಲ್ಲೇ ಹಿಂದೆ ಬೀಳುತಿತ್ತು. ಅಂಬಿಕನಿಗೆ ಕ್ರಮೇಣ ಆವೇಶ ತುಂಬಿತು. ಅವರು ಮೊದಲ ಪಟದಮೇಲೆ ಎರಡನೆಯ ಪಟ, ಎರಡನೆಯದರ ಮೇಲೆ ಪುಟ್ಟದಾದ ಮೂರನೆಯ ಪಟವನ್ನು ಎತ್ತಿಕಟ್ಟಿದರು ಗಾಳಿಯ ವೇಗದಲ್ಲಿ ಉದ್ದನಾದ ಕಂಬ ಮುಂದಕ್ಕೆ ಒಗ್ಗಿತು. ವಿದೀರ್ಣ ತರಂಗರಾಶಿಯ ಮೇಲೆ ಅಟ್ಟಹಾಸದೊಡನೆ ದೋಣಿ ಲಗಾಮು ಕಿತ್ತುಕೊಂಡ ಕುದುರೆಯಂತೆ ಓಡತೊಡಗಿತು. ಒಂದೆಡೆಯಲ್ಲಿ ಸ್ಟೀಮರಿನ ಹಾದಿ ಸ್ವಲ್ಪ ಕಿರಿದಾಗಿತ್ತು. ಅಲ್ಲಿ ದೋಣಿ ಸ್ಟೀಮರನ್ನು ಹಿಂದೆ ಬಿಟ್ಟು ಮುಂದೆ ನಡೆಯಿತು. ಮ್ಯಾನೇಜರ್ ಕೋಪದಿಂದ ಮೈಮುರಿದು ಕಟಕಟೆಯ ಮೇಲೆ

ಒರಗಿಕೊಂಡು ನಿಂತು ಈ ಮೇಲಾಟ ನೋಡುತ್ತಾ ನಿಂತಿದ್ದರು. ನಾವೆ ಸಾಧ್ಯವಾದ ವೇಗವನ್ನು ಪಡೆದಾಗ, ಸ್ಟೀಮರನ್ನು ಹಿಂದೆ ಹಾಕಿ ನಾಲ್ಕು ಮಾರು ಮುಂದುವರಿದಾಗ, ಸಾಹೇಬನು ಹಠಾತ್ತಾಗಿ ಬಂದೂಕೊಂದನ್ನು ಎತ್ತಿಕೊಂಡು ಉಬ್ಬಿದ ಪಟವನ್ನು ಗುರಿಯಿಟ್ಟು ಹಾರಿಸಿದನು. ಮುಹೂರ್ತ ಮಾತ್ರದಲ್ಲಿ ಪಟ ಹರಿಯಿತು.

ಮ್ಯಾನೇಜರ್ ಏತಕ್ಕೆ ಹೀಗೆ ಮಾಡಿದನೆಂಬುದು ಹೇಳುವುದು ಕಠಿಣ. ಆಂಗ್ಲನಂದನರ ಮನದ ಭಾವ ಬಂಗಾಲಿಗಳಾದ ನಾವು ಸರಿಯಾಗಿ ಅರಿಯಲು ಸಾಧ್ಯವಿಲ್ಲ. ಪ್ರಾಯಶಃ ದೇಶೀಪಟದ ಮೇಲಾಟ ಆತ ಸಹಿಸಲಾರದವನಾಗಿರಬೇಕು. ಅಥವಾ ಉಬ್ಬಿ ಹರಡಿಕೊಂಡಿದ್ದ ಒಂದು ಪದಾರ್ಥವನ್ನು ಕಂಡು ಬಂದೂಕಿನ ಏಟಿನಿಂದ ಹೊಡೆಯುವ ಚಪಲ ಅಡಗಿಸಲಾರದೆ ಹೋಗಿರಬಹುದು. ಅಥವಾ ಈ ಹೆಮ್ಮೆಗೊಂಡ ನಾವೆಯನ್ನು ಪಟದಲ್ಲಿ ಕೆಲವನ್ನು ರಂಧ್ರಮಾಡಿ ನಿಮಿಷ ಮಾತ್ರದಲ್ಲಿ ಇದರ ನೌಕಾ ಲೀಲೆ ಸಮಾಪ್ತಗೊಳಿಸುವುದರಲ್ಲಿ ಪ್ರಬಲ ಪೈಶಾಚಿಕ ಹಾಸ್ಯರಸವಿದೆಯೋ ಏನೋ ಖಂಡಿತ ಹೇಳಲು ಸಾಧ್ಯವಿಲ್ಲ. ಆದರೆ ಒಂದು ಮಾತು ಖಂಡಿತ—ಈ ಬಗೆಯ ರಸಿಕತೆ ತೋರುವ ಕಾರಣದಿಂದ ಸಂಭವಿಸಬಹುದಾದ ಕಷ್ಟನಷ್ಟಗಳಿಗೆ ತಾವು ಯಾವ ವಿಧದಲ್ಲಿಯೂ ಹೊಣೆಗಾರರಾಗಬೇಕಾದ ಆವಶ್ಯಕತೆಯಿಲ್ಲವೆಂಬ ಭಾವನೆಯೊಂದು ಆಂಗ್ಲರಲ್ಲಿ ಒಂದು ನಂಬಿಕೆಯಿತ್ತು—ಹಾಗೆಯೇ ನಾವೆ ಕಳೆದುಕೊಂಡು ಜೀವ ಉಳಿಯುವುದೇ ಅನುಮಾನವಾಗಿದೆಯೆನ್ನುವ ಸ್ಥಿತಿಯಲ್ಲಿದ್ದವರು ಮನುಷ್ಯ ಜಾತಿಗೇ ಸೇರಿದವರಲ್ಲವೆಂದು ಅವರಲ್ಲಿ ಒಂದು ಬಗೆಯ ಅಭಿಪ್ರಾಯವಿತ್ತು.

ಸಾಹೇಬರು ಬಂದೂಕು ಎತ್ತಿ ಗೋಲಿ ಹಾರಿಸಿದಾಗ ದೋಣಿ ಮುಳುಗಿ ಹೋದಾಗ ಶಶಿಭೂಷಣನ ಪ್ಯಾನ್ಸಿ* ಘಟನೆ ನಡೆದ ಸ್ಥಳದ ಸಮೀಪದಲ್ಲಿತ್ತು. ಮೇಲೆ ಹೇಳಿದ ಘಟನೆಯನ್ನು ಇವನು ಕಣ್ಣಾರ ಕಂಡನು. ಅವಸರದೊಡನೆ ದೋಣಿ ನಡಸಿಕೊಂಡು ಹೋಗಿ ಅಂಬಿಗರನ್ನೂ ಅವರ

---

* ಪ್ಯಾನ್ಸಿ—ಒಬ್ಬನೇ ಒಬ್ಬ ಹುಟ್ಟು ಹಾಕಿಕೊಂಡು ಹೋಗಲು ಅನುಕೂಲಿಸುವ ಹಗುರವಾದ ದೋಣಿ.

ಮುಖಂಡನನ್ನೂ ಬದುಕಿಸಿದನು. ಒಬ್ಬನೇ ಒಬ್ಬ ಮಾತ್ರ ಒಳಗೆ ಅಡಿಗೆಗಾಗಿ ಖಾರ ಅರೆಯುತ್ತಿದ್ದ ಅವನನ್ನು ಮತ್ತೆ ಕಾಣಲಿಲ್ಲ. ಮಳೆಗಾಲದ ನದಿ ಅತಿ ವೇಗವಾಗಿ ಹರಿದು ನಡೆಯಿತು.

ಶಶಿಭೂಷಣನ ಹೃತ್ಪಿಂಡದಲ್ಲಿ ಕುದಿಯುವ ರಕ್ತ ಉಕ್ಕಿ ಏರತೊಡಗಿತು. ಕಾನೂನು ಅತ್ಯಂತ ಮೆಲುನಡಗೆಯದು—ಅದೊಂದು ಜಟಿಲವಾದ ದೊಡ್ಡ ಕಬ್ಬಿಣದ ಯಂತ್ರದಂತೆ ತೂಕವಾಡಿ ಅದು ಪ್ರಮಾಣ ಅಂಗೀಕರಿಸುವುದು ಮತ್ತು ನಿರ್ವಿಕಾರಭಾವದಿಂದ ಅದು ಶಾಸ್ತಿಯನ್ನು ಹಂಚಿಕೊಡುವುದು. ಅದರಲ್ಲಿ ಮಾನವ ಹೃದಯದ ಉತ್ತಾಪವಿಲ್ಲ. ಆದರೆ ಹಸಿವಿನಿಂದ ಊಟ, ಆಸೆಯಿಂದ ಅನುಭವಿಸುವಿಕೆ ಮತ್ತು ರೋಷದಿಂದ ಶಾಸ್ತಿ ಇವುಗಳನ್ನು ಬೇರ್ಪಡಿಸುವುದು ಇವೆಲ್ಲ ಅಸ್ವಾಭಾವಿಕವಾದ ನಡವಳಿಕೆಯೆಂದು ಶಶಿಭೂಷಣನ ಅಭಿಪ್ರಾಯ. ಕೆಲವು ಅಪರಾಧಗಳು ದೃಷ್ಟಿಗೆ ಗೋಚರವಾದೊಡನೆ ತಕ್ಷಣ ತಕ್ಕ ಶಾಸ್ತಿ ಮಾಡದೆ ಹೋದುದಾದರೆ ಅಂತರ್ಯದಲ್ಲಿ ಅಡಗಿರುವ ವಿಧಾತ ಒಳಗಿದ್ದುಕೊಂಡು ಅವನನ್ನು ಉರಿಸುತ್ತಿರುವನಂತೆ. ಆಗ ಕಾಯಿದೆ ಕಾನೂನುಗಳನ್ನು ನೆನೆಸಿಕೊಂಡು ಸಮಾಧಾನ ಹೊಂದಲು ಹೃದಯ ನಾಚಿಕೆಪಡುವುದು. ಆದರೆ ಯಂತ್ರದಂತಹ ಕಾಯಿದೆ ಮತ್ತು ಯಂತ್ರದ ಜಹಜು ಮ್ಯಾನೇಜರನನ್ನು ಶಶಿಭೂಷಣನಿಂದ ದೂರ ಸಾಗಿಸಿಕೊಂಡು ಹೋದುವು ಅದರಿಂದ ಜಗತ್ತಿನಲ್ಲಿ ಬೇರೆ ಯಾವ ಉಪಕಾರವಾಯಿತೋ ಹೇಳಲು ಸಾಧ್ಯವಿಲ್ಲ. ಆದರೆ ಆ ಪಯಣದಲ್ಲಿ ಶಶಿಭೂಷಣನ್ ಭಾರತೀಯ ಪ್ಲೀಹ ಉಳಿಯಿತೆಂದನ್ನಲು ಸಂದೇಹವೇ ಇಲ್ಲ.

ಬದುಕಿಕೊಂಡ ಅಂಬಿಗರನ್ನು ಕರೆದುಕೊಂಡ ಶಶಿ ಗ್ರಾಮಕ್ಕೆ ಹಿಂದಿರುಗಿದನು. ದೋಣಿಯಲ್ಲಿ ಸೆಣಬು ಹೇರಿತ್ತು. ಆ ಹೇರನ್ನು ನೀರಿನಿಂದ ಎತ್ತಲು ಜನರನ್ನು ಗೊತ್ತುಮಾಡಿ ಮ್ಯಾನೇಜರ ವಿರುದ್ಧವಾಗಿ ಪೋಲೀಸಿನಲ್ಲಿ ದೂರು ಕೊಡುವಂತೆ ಅಂಬಿಗರ ಮುಖಂಡನಿಗೆ ಹೇಳಿದನು.

ಮುಖಂಡ ಖಂಡಿತ ಒಪ್ಪಲಿಲ್ಲ. ದೋಣಿಯನ್ನಂತೂ ಮುಳುಗಿಸಿಕೊಂಡಿದೇವೆ. ಇನ್ನು ನಮ್ಮನ್ನು ಮುಳುಗಿಸಿಕೊಳ್ಳುವುದು ಸಾಧ್ಯವಾಗದ ಸಂಗತಿ ಎಂದನು. ಮೊದಲು ಪೋಲೀಸರಿಗೆ ನಜರ್ ಒಪ್ಪಿಸಬೇಕು. ಅನಂತರ ಕೆಲಸಕಾರ್ಯ, ಊಟ, ನಿದ್ರೆಬಿಟ್ಟು ಕೋರ್ಟಿನಿಂದ ಕೋರ್ಟಿಗೆ ತಿರುಗುತ್ತಿರ

ಬೇಕು. ಆದರವರ ಮೇಲೆ ಸಾಹೇಬರ ಮೇಲೆ ವ್ಯಾಜ್ಯಹೂಡಿ ಯಾವ ಸಂಕಟಕ್ಕೆ ಸಿಕ್ಕಿಕೊಳ್ಳಬೇಕಾದೀತು. ಏನು ಫಲ ದೊರೆತೀತು ಎಂಬುದನ್ನಂತೂ ಭಗವಂತನೇ ಬಲ್ಲ. ಕೊಟ್ಟಕೊನೆಯಲ್ಲಿ ಶಶಿಭೂಷಣ ಸ್ವತಃ ವಕೀಲನೆಂದೂ, ಕೋರ್ಟಿನ ಖರ್ಚನ್ನು ಆತನೇ ವಹಿಸುವನೆಂದೂ, ವ್ಯಾಜ್ಯದಲ್ಲಿ ಮುಂದೆ ಖಂಡಿತವಾಗಿಯೂ ಜಯವಾಗುವ ನಂಬಿಕೆಯಿದೆಯೆಂದೂ ತಿಳಿದಮೇಲೆ ಅವನು ಒಪ್ಪಿದನು. ಆದರೆ ದೋಣಿಯಲ್ಲಿದ್ದ ಶಶಿಭೂಷಣನ ಗ್ರಾಮದ ಜನ ಸಾಕ್ಷಿ ಹೇಳಲೂ ಖಂಡಿತ ಒಪ್ಪಲಿಲ್ಲ. ಅವರುಗಳು ಶಶಿಭೂಷಣನೊಡನೆ "ಸ್ವಾಮಿ, ನಾವು ಏನನ್ನೂ ಕಾಣಲಿಲ್ಲ. ನಾವುಗಳು ಜಹಜಿನ ಹಿಂಭಾಗದಲ್ಲಿದ್ದೆವು. ಇಂಜನ್ನಿನ ಗಡಗಡ ಮತ್ತು ನೀರಿನ ಕಲಕಲ ಶಬ್ದದಲ್ಲಿ ಆ ಸ್ಥಳದಿಂದ ಬಂದೂಕಿನ ಸದ್ದು ಕೇಳಲು ಎಡೆಯೇ ಇರಲಿಲ್ಲ" ಎಂದರು.

ಸ್ವದೇಶದ ಜನರನ್ನು ಮನಸಿನಲ್ಲೇ ಧಿಕ್ಕರಿಸುತ್ತ ಶಶಿಭೂಷಣ ಮ್ಯಾಜಿಸ್ಟ್ರೇಟರಲ್ಲಿ ಮೊಕದ್ದಮೆ ದಾಖಲು ಮಾಡಿದನು.

ಸಾಕ್ಷಿಗಳ ಆವಶ್ಯಕತೆಯೇ ಆಗಲಿಲ್ಲ. ಮ್ಯಾನೇಜರೇ ಸ್ವತಃ ಬಂದೂಕು ಹಾರಿಸಿದುದನ್ನು ಒಪ್ಪಿಕೊಂಡರು. ಆಕಾಶದಲ್ಲಿ ಒಂದು ಹಿಂಡು ಕೊಕ್ಕರೆಗಳು ಹಾರಿಹೋಗುತಿದ್ದುವು. ಅವುಗಳ ಮೇಲೆಯೇ ಗುರಿ ಇಡಲಾಗಿತ್ತು. ಆ ಸಮಯದಲ್ಲಿ ಸ್ಟೀಮರ್ ಪೂರ್ಣ ವೇಗದಿಂದ ನದಿಯ ತಿರುವಿನಲ್ಲಿ ಹೋಗುತಿತ್ತು. ಕಾಗೆ ಸತ್ತಿತೇ, ಕೊಕ್ಕರೆ ಸತ್ತಿತೇ ಅಥವಾ ದೋಣಿ ಮುಳುಗಿತೇ, ಯಾವುದನ್ನೂ ತಾನು ತಿಳಿಯನು ಆಕಾಶದಲ್ಲಿ ಮತ್ತು ನೆಲದಮೇಲೆ ಇಷ್ಟೊಂದು ಬೇಟೆಯ ಪ್ರಾಣಿಗಳು ಇರುತ್ತಿರಲು ಯಾವನಾದರೊಬ್ಬ ಬುದ್ಧಿಯುಳ್ಳ ಮನುಷ್ಯ ಮನಃಪೂರ್ವಕವಾಗಿ "ಡರ್ಬಿ ರ್‍ಯಾಗ್" ಅರ್ಥಾತ್ ಕೊಳಕು ಚಿಂದಿಯ ಮೇಲೆ ಒಂದು ಹಣ ಬೆಲೆಯ ಚರೆಯನ್ನಾದರೂ ಅಪವ್ಯಯ ಮಾಡುವನೇನು ? ಎಂದು ಹೇಳಿದನು.

ನಿರ್ದೋಷಿಯಾಗಿ ಬಿಡುಗಡೆ ಹೊಂದಿದ ಮ್ಯಾನೇಜರ್ ಸಾಹೇಬನು ಚುಟ್ಟಾ ಹೊಗೆ ಊದುತ್ತ ಊದುತ್ತ ಕ್ಲಬ್ಬಿನಲ್ಲಿ 'ವ್ಹಿಸ್ಟ' ಆಡಲು ಹೊರಟುಹೋದನು. ದೋಣಿಯಲ್ಲಿ ಮಸಾಲೆ ಅರೆಯುತಿದ್ದನಲ್ಲ ಅವನ ಹಣ ಒಂಭತ್ತು ಮೈಲಿ ಕೆಳಗೆ ದಡವನ್ನು ಮುಟ್ಟಿತು. ಶಶಿಭೂಷಣ ಎದೆಯುರಿಯೊಡನೆ ಹಳ್ಳಿ ಸೇರಿದನು.

ಹಿಂದಿರುಗಿದ ದಿನ ನಾವೆಯನ್ನು ಸಿಂಗರಿಸಿ ಗಿರಿಬಾಲೆಯನ್ನು ಅತ್ತೆಯ ಮನೆಗೆ ಕರೆದುಕೊಂಡು ಹೋಗುತಿದ್ದರು. ತನ್ನನ್ನು ಯಾರೂ ಕರೆಯ ದಿದ್ದರೂ ಶಶಿಭೂಷಣ ಮೆಲ್ಲಮೆಲ್ಲನೆ ನದೀತೀರದಲ್ಲಿ ಬಂದು ನಿಂತನು. ಘಟ್ಟದಲ್ಲಿ ಜನಗಳ ಗುಂಪಿತ್ತು. ಅಲ್ಲಿಗೆ ಹೋಗದೆ ಸ್ವಲ್ಪ ಮುಂದೆ ನಡೆದು ಹೋಗಿ ನಿಂತುಕೊಂಡನು ನಾವೆ ಘಟ್ಟ ಬಿಟ್ಟು ಅವನಿದ್ದ ಸ್ಥಳಕ್ಕೆ ಇದಿ ರಾಗಿ ಹೋದಾಗ ಮುಸುಕಿನಲ್ಲಿ ಮುಖ ಮುಚ್ಚಿಕೊಂಡು ಕುಳಿತಿದ್ದ ಮದವಣ ಗಿತ್ತಿಯನ್ನು ಆಶ್ಚರ್ಯದೊಡನೆ ನೋಡಿದನು. ಹಳ್ಳಿ ಬಿಟ್ಟು ಹೋಗುವ ಮುಂದೆ ಯಾವ ಬಗೆಯಲ್ಲಾದರೂ ಒಮ್ಮೆ ಶಶಿಭೂಷಣನೊಡನೆ ಭೇಟಿ ಯಾದೀತೇ ಎಂದು ಗಿರಿಬಾಲೆಗೆ ಬಹು ದಿನಗಳಿಂದ ಆಸೆಯಿತ್ತು; ಆದರೆ ಇಂದು ಅವಳ ಗುರು ಹತ್ತಿರದಲ್ಲೇ ದಡದಮೇಲೆ ನಿಂತಿರುವನೆಂಬ ವಿಷಯ ಅವಳಿಗೆ ತಿಳಿಯಲೇ ಇಲ್ಲ. ಅವಳು ಒಮ್ಮೆಯಾದರೂ ತಲೆಯೆತ್ತಿ ನೋಡಲೂ ಇಲ್ಲ. ಕೇವಲ ಸದ್ದಿಲ್ಲದ ಅಳುವಿನಿಂದ ಅವಳ ಕಪೋಲಗಳೆರಡರ ಮೇಲೂ ಕಣ್ಣೀರು ಹರಿಯುತಿತ್ತು.

ದೋಣಿ ಕ್ರಮಶಃ ದೂರ ಹೋಗಿ ಕಣ್ಮರೆಯಾಯಿತು. ನೀರಿನ ಮೇಲೆ ಬೆಳಗಿನ ಸೂರ್ಯನ ಕಿರಣ ಥಳಥಳಿಸುತಿತ್ತು. ಸಮೀಪದ ಮಾವಿನ ಮರದ ರೆಂಬೆಯ ಮೇಲೆ ಒಂದು ಗೀಜುಗ ದೊಡ್ಡ ದನಿಯಲ್ಲಿ ಕೂಗುತ್ತ ಮನಸ್ಸಿನ ಉದ್ವೇಗವನ್ನು ಯಾವ ಬಗೆಯಲ್ಲೂ ಅಡಗಿಸಿಕೊಳ್ಳ ಲಾರದೆ ಇತ್ತು. ಕಡವಿನ ದೋಣಿ ಹಾಯುವವರನ್ನು ಹತ್ತಿಸಿಕೊಂಡು ಆಚೆಯ ದಡಕ್ಕೆ ಮುಟ್ಟುವುದರಲ್ಲಿತ್ತು. ಹೆಂಗಸರು ನೀರು ತೆಗೆದುಕೊಂಡು ಹೋಗಲು ಬಂದು ದೊಡ್ಡ ದನಿಯಲ್ಲಿ ಗಿರಿಬಾಲೆ ಅತ್ತೆಯ ಮನೆಗೆ ಪ್ರಯಾಣ ಮಾಡಿದ ಸಂಗತಿ ಮಾತನಾಡತೊಡಗಿದರು. ಶಶಿಭೂಷಣ ಕನ್ನಡಕ ತೆಗೆದು ಕಣ್ಣುಗಳನ್ನು ಒರಸಿಕೊಂಡು ಆ ಹಳೆಯ ಹಾದಿಯ ಮಾರ್ಗವಾಗಿ ಆ ಸಲಾಕಿ ಹಾಕಿದ ಸಣ್ಣ ಕೊಟಡಿಯನ್ನು ಹೊಕ್ಕನು. ಹಠಾತ್ತಾಗಿ ಒಮ್ಮೆ "ಶಶಿ ಅಣ್ಣಾ" ಎಂದು ಗಿರಿಬಾಲೆ ಕೂಗಿದಂತೆ ಅವನಿಗೆ ತೋರಿತು. ಅವಳೆಲ್ಲಿ, ಎಲ್ಲಿ ಅವಳು? ಎಲ್ಲಿಯೂ ಇಲ್ಲ. ಆ ಮನೆಯಲ್ಲೂ ಇಲ್ಲ. ಆ ಹಾದಿಯಲ್ಲೂ ಇಲ್ಲ. ಆ ಗ್ರಾಮದಲ್ಲೂ ಇಲ್ಲ—ಕಣ್ಣೀರಿನಿಂದ ಕರಗಿದ ಅವನ ಹೃದಯ ದಲ್ಲಿಷ್ಟೇ ಇದ್ದಳು.

## ಅಷ್ಟಮ ಪರಿಚ್ಛೇದ

ಶಶಿಭೂಷಣ ಮತ್ತೆ ಸಾಮಾನುಗಳನ್ನು ಕಟ್ಟಿಕೊಂಡು ಕಲ್ಕತ್ತೆಯ ಅಭಿಮುಖವಾಗಿ ಹೊರಟನು. ಕಲ್ಕತ್ತೆಯಲ್ಲಿ ಯಾವ ಕೆಲಸವೂ ಇರಲಿಲ್ಲ. ಅಲ್ಲಿಗೆ ಹೋಗುವುದರಲ್ಲಿ ಯಾವ ಉದ್ದೇಶವೂ ಇರಲಿಲ್ಲ. ಅದರಿಂದಲೇ ರೈಲಿನಲ್ಲಿ ಹೋಗದೆ ನದಿಯ ಮಾರ್ಗವಾಗಿ ಹೋಗುವುದಾಗಿ ನಿರ್ಧರಿಸಿದ್ದನು.

ಆ ಕಾಲದಲ್ಲಿ ತುಂಬು ಮಳೆಯಿಂದ ಬಂಗಾಳ ದೇಶದ ನಾಲ್ಕು ದಿಕ್ಕಿನಲ್ಲೂ ನೀರು ತುಂಬಿದ ಬಲೆ ಹರಡಿಕೊಂಡಿತ್ತು. ಸರಲ ಶ್ಯಾಮಲ ವಂಗಭೂಮಿಯ ನರನಗಳು ತುಂಬಿಕೊಂಡುವಾಗಿ ತರುಲತೆ, ತೃಣಗುಲ್ಮ, ಗಿಡಮರ, ಭತ್ತ ಸೆಣಬು, ಕಬ್ಬು ಇವುಗಳಿಂದ ಹತ್ತು ದಿಕ್ಕಿನಲ್ಲೂ ಉನ್ಮತ್ತಯೌವನದ ಪ್ರಾಚುರ್ಯದಿಂದ ಒಮ್ಮೆಗೇ ಹದ್ದುಮೀರಿ ಮೆರೆಯುವಂತಿತ್ತು.

ಶಶಿಭೂಷಣನ ನಾವೆ ಆ ಕಿರಿದಾದ ಹಲವು ಸೊಟ್ಟ ನದೀ ಕಾಲುವೆಗಳ ಮಾರ್ಗವಾಗಿ ಮುಂದುವರಿಯುತಿತ್ತು. ನೀರು ಆಗ ದಡದೊಡನೆ ಸಮನಾಗಿತ್ತು. ಹುಲ್ಲುಗಾವಲು, ಹೊಡಕೆಯ ಬೈಲು ಮತ್ತು ಅಲ್ಲಲ್ಲಿ ಹೊಲಗದ್ದೆಗಳು ನೀರಿನಲ್ಲಿ ಮುಳುಗಿದ್ದುವು. ಹಳ್ಳಿಯ ಬೇಲಿ, ಬಿದಿರ ಮೆಳೆ ಮತ್ತು ಮಾವಿನ ತೋಪು ಒಮ್ಮೆಗೇ ನೀರಿನ ತಡಿಯನ್ನು ಮುಟ್ಟಿದ್ದುವು—ದೇವಕನ್ನೆಯರು ಬಂಗಾಳ ದೇಶದ ಗಿಡಮರಗಳ ಬುಡದ ಕಟ್ಟೆಗಳಲ್ಲಿ ನೀರೆರೆದು ಪರಿಪೂರ್ಣಗೊಳಿಸುವಂತಿದ್ದುವು.

ಪಯಣದ ಮೊದಲಲ್ಲಿ ಸ್ನಾನಮಾಡಿ ಚೊಕ್ಕಟವಾಗಿದ್ದ ವನದ ಸೊಬಗು ಬಿಸಿಲಿನಲ್ಲಿ ನಗುತಿತ್ತು. ಸ್ವಲ್ಪ ಹೊತ್ತಿನಲ್ಲೇ ಮೋಡ ಮುಚ್ಚಿಕೊಂಡು ಮಳೆ ಪ್ರಾರಂಭವಾಯಿತು ಆಗ ಎತ್ತ ದೃಷ್ಟಿ ಬೀರಿದರೂ ಆ ಸ್ಥಳ ವಿಷಣ್ಣವಾಗಿಯೂ ಮೂಕವಾಗಿಯೂ ಕಾಣುತಿದ್ದಿತು. ಪ್ರವಾಹದ ಸಮಯದಲ್ಲಿ ದನಕರುಗಳು ನೀರು ತುಂಬಿ ಕೊಳಕಾಗಿ ಕೆಸರಾದ ಕೊಟ್ಟಿಗೆಯ ಗುಂಪುಕೂಡಿ ಕರುಣದೃಷ್ಟಿಯೊಡನೆ ಸಹಿಷ್ಣುಭಾವದೊಡನೆ ನಿಂತುಕೊಂಡು ಶ್ರಾವಣದ ಸುರಿಮಳೆಯಲ್ಲಿ ಹೇಗೆ ನೆನೆಯುತ್ತ ಇರುವವು ಹಾಗೆ ಬಂಗಾಳ ದೇಶ ತನ್ನ ಕೆಸರಿನಿಂದ ಜಾರುವ ದಟ್ಟವಾದ ಕಾಡಿನ ನಡುವೆ ಸದ್ದಿಲ್ಲದ ವಿಷಣ್ಣಮುಖದೊಡನೆ ಎಡೆಬಿಡದೆ ನೆನೆಯುತಿತ್ತು. ಬೇಸಾಯಗಾರರು ತಲೆಯ ಮೇಲೆ ಗೊರಗ ಹಾಕಿಕೊಂಡು ಹೊರಗೆ ಹೋಗುತಿದ್ದರು. ಹೆಂಗಸರು ನೆನೆ

ಯುತ್ತ ನೆನೆಯುತ್ತ ತಂಗಾಳಿಯಲ್ಲಿ ಮೈ ಮುದುರಿಕೊಳ್ಳುತ್ತ ಗುಡಿಸಲಿಂದ ಗುಡಿಸಲಿಗೆ ಮನೆಗೆಲಸದಲ್ಲಿ ಓಡಿಯಾಡುತಿದ್ದರು. ಜಾರುತಿದ್ದ ಘಟ್ಟದಲ್ಲಿ ಅತಿ ಎಚ್ಚರಿಕೆಯಿಂದ ಹೆಜ್ಜೆಯಿಡುತ್ತ ತೋಯ್ದ ಬಟ್ಟೆಯೊಡನೆ ನೀರು ಎತ್ತಿಕೊಂಡು ಹೋಗುತಿದ್ದರು. ಗೃಹಸ್ಥ ಪುರುಷರು ಮನೆಯ ಪಡಸಾಲೆಯಲ್ಲಿ ಕುಳಿತು ತಂಬಾಕು ಸೇದುತಿದ್ದರು. ಕೆಲಸಮಾಡಿ ತೀರಲೇಬೇಕಾಗಿದ್ದರೆ ಸೊಂಟಕ್ಕೆ ಧೋತಿ ಎತ್ತಿ ಕಟ್ಟಿಕೊಂಡು ಕೈಯಲ್ಲಿ ಮೆಟ್ಟು, ತಲೆಯ ಮೇಲೆ ಛತ್ರಿ ಹಿಡಿದುಕೊಂಡು ಹೊರಗೆ ಹೋಗುತಿದ್ದರು. ಅಬಲೆ ಸ್ತ್ರೀಯರ ತಲೆಯ ಮೇಲೆ ಮಾತ್ರ ಛತ್ರಿ ಬಿಸಿಲಿನಿಂದ ಸೀದು ಮಳೆಯಿಂದ ನೆನೆಯುವುದು ಈ ಬಂಗಾಳ ದೇಶದ ಸನಾತನ ಪವಿತ್ರ ಪದ್ಧತಿಯಲ್ಲಿ ಇಲ್ಲ.

ಮಳೆ ಬಡಪೆಟ್ಟಿಗೂ ನಿಲ್ಲದೆ ಹೋಗಲು ಆಗ ದೋಣಿಯಲ್ಲಿ ಕಾಲು ಕಟ್ಟಿದಂತಿದ್ದ ಶಶಿಭೂಷಣ ಬೇಸರಗೊಂಡವನಾಗಿ ಪುನಃ ರೈಲ್ ಮಾರ್ಗವಾಗಿ ಹೋಗುವುದಾಗಿ ತೀರ್ಮಾನಿಸಿದನು. ಒಂದೆಡೆಯಲ್ಲಿ ಪ್ರಶಸ್ತವಾದೊಂದು ಸಂಗಮದಲ್ಲಿ ಬಂದು ಶಶಿಭೂಷಣ ದೋಣಿಯನ್ನು ದಡಕ್ಕೆ ಕಟ್ಟಿ ಅಡಿಗೆಯ ಪ್ರಯತ್ನ ಮಾಡತೊಡಗಿದನು.

ಕುಂಟನ ಕಾಲು ಕುಣಿಯಲ್ಲೇ ಬೀಳುವುದು. ಅದು ಕೇವಲ ಕುಣಿಯ ದೋಷವಲ್ಲ. ಕುಂಟನ ಕಾಲಿಗೂ ಬೀಳುವ ವಿಷಯದಲ್ಲಿ ಸ್ವಲ್ಪ ಹೆಚ್ಚು ಆಕರ್ಷಣೆ ಇರುವುದು. ಶಶಿಭೂಷಣ ಅಂದು ಇದಕ್ಕೊಂದು ಉದಾಹರಣೆಯಾದನು.

ನದಿಗಳೆರಡರ ಸಂಗಮದಲ್ಲಿ ಬೆಸ್ತರು ಗಳ ನೆಟ್ಟು ದೊಡ್ಡದೊಂದು ಬಲೆ ಬೀಸಿದ್ದರು. ಒಂದೇ ಒಂದು ಮಗ್ಗುಲಲ್ಲಿ ಮಾತ್ರ ದೋಣಿ ನಡೆಯಲು ಎಡೆ ಬಿಟ್ಟಿದ್ದರು. ಬಹು ಕಾಲದಿಂದ ಅವರುಗಳು ಈ ಕೆಲಸಮಾಡುತಿದ್ದರು. ಅದಕ್ಕಾಗಿ ಕಂದಾಯ ಕಟ್ಟುತ್ತಲೂ ಇದ್ದರು. ದುರ್ಭಾಗ್ಯವಶತಃ ಈ ವರ್ಷ ಈ ದಾರಿಯಲ್ಲಿ ಹಠಾತ್ತಾಗಿ ಜಿಲ್ಲೆಯ ಪೋಲೀಸ್ ಸುಪರಿಂಟೆಂಡೆಂಟ್ ಬಹದ್ದೂರರ ಶುಭಾಗಮನ ಸಂಭವಿಸಿತು. ಅವರ ದೋಣಿ ಬರುತ್ತಿರುವುದನ್ನು ಕಂಡು ಬೆಸ್ತರು ಮೊದಲಿನಿಂದಲೇ ಮಗ್ಗುಲ ಹಾದಿ ತೋರಿ ಗಟ್ಟಿಯಾದ ದನಿಯಲ್ಲಿ ಎಚ್ಚರಿಸಿದ್ದರು. ಆದರೆ ಮನುಷ್ಯರು ರಚಿಸಿದ ಯಾವ ಅಡ್ಡಿಯನ್ನೇ ಆಗಲಿ ಗೌರವಿಸಿ ಬಳಸಿಕೊಂಡು ಹೋಗುವುದು ಸಾಹೇಬರ

ದೋಣಿಯು ಅಂಬಿಗರ ಅಭ್ಯಾಸವಿಲ್ಲ. ಅವರುಗಳು ಆ ಬಲೆಗಳ ಮೇಲೆಯೇ ದೋಣಿ ನಡೆಸಿಕೊಂಡು ಹೋದರು. ಬಲೆ ಬಗ್ಗಿಕೊಂಡು ದೋಣಿಗೆ ದಾರಿ ಕೊಟ್ಟಿತು. ಆದರೆ ಅದರ ಕೀಲಿಗೆ ಸುತ್ತಿಕೊಂಡಿತು. ಸ್ವಲ್ಪ ಸಾವಕಾಶ ಮತ್ತು ಪ್ರಯತ್ನದೊಡನೆ ಕೀಲು ಬಿಡಿಸಿಕೊಳ್ಳಬೇಕಾಯಿತು.

ಪೋಲೀಸ್ ಸಾಹೇಬರು ಬಹಳ ಬಿಸಿಯಾದರು. ಕೆಂಪಗೆ ಮುಖ ಮಾಡಿಕೊಂಡು ದೋಣಿ ನಿಲ್ಲಿಸಹೇಳಿದರು. ಅವರ ಸ್ವರೂಪ ಕಂಡೊಡನೆ ಬೆಸ್ತರು ಒಂದೇ ಉಸುರಿಗೆ ಓಡಿಹೋದರು. ಸಾಹೇಬರು ಬಲೆ ಕತ್ತರಿಸಿ ಹಾಕುವಂತೆ ತಮ್ಮ ಅಂಬಿಗರಿಗೆ ಅಪ್ಪಣೆ ಮಾಡಿದರು. ಅವರುಗಳು ಆ ಏಳು ನೂರು ಎಂಟು ನೂರು ರೂಪಾಯಿಗಳ ಬೆಲೆಯ ದೊಡ್ಡ ಬಲೆಯನ್ನು ಕತ್ತರಿಸಿ ತುಂಡು ತುಂಡು ಮಾಡಿದರು.

ಬಲೆಯ ಮೇಲೆ ಸಿಟ್ಟು ತೀರಿಸಿಕೊಂಡು ಕೊನೆಗೆ ಬೆಸ್ತರನ್ನು ಹಿಡಿದು ತರುವಂತೆ ಅಪ್ಪಣೆ ಮಾಡಿದರು. ಕಾನ್‌ಸ್ಟೆಬಲ್‌ಗಳು ಓಡಿಹೋದ ಬೆಸ್ತರ ಸುಳಿವು ಕಾಣದೆ ಕೈಗೆ ಸಿಕ್ಕಿದ ನಾಲ್ಕು ಜನರನ್ನು ಹಿಡಿದು ತಂದರು. ಪೋಲೀಸ್ ಸಾಹೇಬರು ಆ ಜನರನ್ನ ಖೈದುಮಾಡಿ ದೋಣಿಯಲ್ಲಿ ಸಂಗಡ ಕರೆದುಕೊಂಡು ಹೋಗುವಂತೆ ಹೇಳಲು, ಅವರುಗಳು ತಾವು ನಿರಪರಾಧಿಗಳೆಂದು ಕೈಮುಗಿದು ಗೋಗರೆಯತೊಡಗಿದರು. ಈ ಸಮಯದಲ್ಲಿ ಕನ್ನಡಕ ಹಾಕಿದ ಶಶಿಭೂಷಣ ಅವಸರದೊಡನೆ ಬಂದು ಜುಬ್ಬಾ ಹಾಕಿಕೊಂಡು, ಅದರ ಗುಂಡಿ ಹಾಕದೆಯೇ ಮೆಟ್ಟನ್ನು ಚಟಪಟ ಸದ್ದುಮಾಡುತ್ತ ಒಂದೇ ಉಸುರಿನಲ್ಲಿ ಓಡಿ ಪೋಲೀಸ್ ದೋಣಿಯ ಹತ್ತಿರಕ್ಕೆ ಬಂದನು. ಕಂಪಿತ ಸ್ವರದಲ್ಲಿ—"ಸಾರ್, ಬೆಸ್ತರ ಬಲೆ ಕತ್ತರಿಸಲು ಮತ್ತು ನಾಲ್ಕು ಜನರನ್ನು ಹಿಡಿದು ಹಿಂಸಿಸಲು ನಿಮಗೆ ಯಾವ ಅಧಿಕಾರವೂ ಇಲ್ಲ" ಎಂದನು.

ಪೋಲೀಸ್ ಅಧಿಕಾರಿ ಅವನಿಗೆ ಹಿಂದೀ ಭಾಷೆಯಲ್ಲಿ ಬಹಳ ಅವಮಾನಕರವಾದೊಂದು ಮಾತು ಹೇಳಲು, ಆ ಕ್ಷಣ ಅವನು ದಡದಿಂದ ದೋಣಿಯೊಳಕ್ಕೆ ನೆಗೆದು ಸಾಹೇಬರ ಮೇಲೆ ಬಿದ್ದನು. ಎಳೆ ಹುಡುಗನಂತೆ, ಹುಚ್ಚನಂತೆ ಹೊಡೆಯತೊಡಗಿದನು.

ಅನಂತರ ಏನಾಯಿತೋ ಅದನ್ನು ಅವನು ಅರಿಯನು. ಪೋಲೀಸರ ಠಾಣೆಯಲ್ಲಿ ಎಚ್ಚರವಾದಾಗ—ಹೇಳಲು ನಾಚಿಕೆಯಾಗುತ್ತೆ. ಆ ಸಮಯ

ದಲ್ಲಿ ಯಾವ ಬಗೆಯ ವ್ಯವಹಾರ ಪಡೆದನೋ ಅದರಿಂದ ಮಾನಸಿಕ ಗೌರವ ವಾಗಲೀ ಶಾರೀರಕ ಸೌಖ್ಯವಾಗಲೀ ಪಡೆಯಲಿಲ್ಲ.

## ನವಮ ಪರಿಚ್ಛೇದ

ಶಶಿಭೂಷಣನ ತಂದೆ ವಕೀಲ್ ಬ್ಯಾರಿಸ್ಟರುಗಳನ್ನು ಇಟ್ಟು ಮೊದಲು ಶಶಿಯನ್ನು ಲಾಕಪ್ಪಿನಿಂದ ಜಾಮೀನಿನಮೇಲೆ ಬಿಡಿಸಿಕೊಂಡರು. ಅನಂತರ ಮೊಕದ್ದಮೆಯ ಏರ್ಪಾಡು ಆರಂಭವಾಯಿತು.

ಬಲೆ ನಷ್ಟವಾಗಿದ್ದ ಬೆಸ್ತರುಗಳಿದ್ದರಲ್ಲಾ ಅವರುಗಳೆಲ್ಲ ಶಶಿಭೂಷಣನ ತಾಲ್ಲೂಕಿನ ಜನರೇ. ಒಬ್ಬ ಜಮೀನುದಾರರ ರೈತರೇ. ವಿಪತ್ತಿನ ಸಮಯ ದಲ್ಲಿ ಒಮ್ಮೊಮ್ಮೆ ಶಶಿಯ ಬಳಿ ಕಾಯಿದೆಯ ಸಲಹೆ ಪಡೆಯಲೂ ಬರು ತಿದ್ದರು. ಸಾಹೇಬರು ದೋಣಿಯಲ್ಲಿ ಹಿಡಿದು ತಂದಿದ್ದ ನಾಲ್ಕು ಜನರೂ ಶಶಿಗೆ ಅಪರಿಚಿತರಾಗಿರಲಿಲ್ಲ.

ಶಶಿ ಅವರುಗಳ ಸಾಕ್ಷಿ ಕೋರಿ ಅವರುಗಳನ್ನು ಕರೆತಂದನು. ಆಗ ಅವರುಗಳು ಸಂಕಟದಲ್ಲಿ ಸಿಕ್ಕಿಕೊಂಡಂತೆ ಆದರು. ಹೆಂಡಿರು ಮಕ್ಕಳೊಡನೆ ಸಂಸಾರ ನಡೆಸಬೇಕಾಗಿರುವವರು ಪೋಲೀಸರೊಡನೆ ವ್ಯಾಜ್ಯ ಕಟ್ಟಿಕೊಂಡರೆ ಬದುಕುವುದಾದರೂ ಹೇಗೆ. ಒಂದಕ್ಕಿಂತ ಹೆಚ್ಚು ಜೀವ ಯಾರ ಮೈಯಲ್ಲಿ ತಾನೆ ಇದೆ. ಎಷ್ಟು ನಷ್ಟ ಆಗಬಹುದೋ ಅಷ್ಟು ಆಗಿದೆ. ಈಗ ಸಾಕ್ಷಿಯ ಕಟಿಕಟಿ ಹತ್ತಿಸಿ ಇದೆಲ್ಲಿಯ ಗೊಂದಲ. ಎಲ್ಲರೂ ಕೂಡಿ—"ಅಯ್ಯನವರೇ, ನೀವು ನಮ್ಮನ್ನು ಒಳ್ಳೆ ಸಂಕಟದಲ್ಲಿ ಸಿಕ್ಕಿಸಿರುವಿರಿ" ಎಂದರು.

ಬಹಳವಾಗಿ ಹೇಳಿ ಕೇಳಿದ ಅನಂತರ ಅವರುಗಳು ನಿಜಸ್ಥಿತಿ ಹೇಳಲು ಒಪ್ಪಿಕೊಂಡರು.

ಈ ಮಧ್ಯೆ ಹರಕುಮಾರ ಬೆಂಚ್ ಕೋರ್ಟಿನ ಕೆಲಸ ಉದ್ದೇಶಿಸಿ ಜಿಲ್ಲೆಯ ಸಾಹೇಬರ ಬಳಿ ಸಲಾಮು ಸಲ್ಲಿಸಲು ಹೋಗಿದ್ದಾಗ, ಪೋಲೀಸ್ ಸಾಹೇಬರು ನಕ್ಕು "ನಾಯಬ್ ಬಾಬೂ, ನಿಮ್ಮ ರೈತರು ಪೋಲೀಸರ ವಿರುದ್ಧವಾಗಿ ಸುಳ್ಳು ಸಾಕ್ಷಿ ಹೇಳಲು ಸಿದ್ಧರಾಗಿರುವುದಾಗಿ ಕೇಳುತ್ತೇನೆ" ಎಂದರು. ನಾಯಬರು ಅಚ್ಚರಿಗೊಂಡವರಾಗಿ "ಏನು! ಹೀಗೆ ಎಂದಾದರೂ ನಡೆಯಲು ಸಾಧ್ಯವಿದೆಯೆ. ಈ ಅಪವಿತ್ರ ಪ್ರಾಣಿಯ ಮಕ್ಕಳ ಮೂಳೆಯಲ್ಲಿ ಅಷ್ಟು ಶಕ್ತಿಯೇ?" ಎಂದರು.

ಸಮಾಚಾರ ಪತ್ರಿಕೆ ಓದುವವರು ಮೊಕದ್ದಮೆಯಲ್ಲಿ ಶಶಿಭೂಷಣನ ವಾದ ಎಳ್ಳಷ್ಟೂ ಊರ್ಜಿತವಾಗಲಿಲ್ಲ ಎಂಬ ಸಂಗತಿ ಬಲ್ಲರು.

ಬೆಸ್ತರು ಒಬ್ಬೊಬ್ಬರಾಗಿ ಬಂದು—“ ಪೋಲೀಸ್ ಸಾಹೇಬರು ತಮ್ಮಗಳ ಬಲೆ ಕತ್ತರಿಸಲಿಲ್ಲ. ದೋಣಿಯಲ್ಲಿ ಕರೆದು ತಮ್ಮ ಹೆಸರು, ವಿಳಾಸ ಬರೆದು ಕೊಳ್ಳುತಿದ್ದರು ” ಎಂದು ಹೇಳಿಕೆ ಕೊಟ್ಟರು.

ಅಷ್ಟು ಮಾತ್ರವೇ ಅಲ್ಲ. ಅವರ ಊರಿನ ನಾಲ್ಕಾರು ಜನ ಪರಿಚಿತ ಗೃಹಸ್ಥರು ತಾವುಗಳು ಆ ಸಮಯದಲ್ಲಿ ಘಟನೆ ನಡೆದ ಸ್ಥಳದಲ್ಲಿ ಮದುವೆಯ ದಿಬ್ಬಣದವರೊಡನೆ ಹೋಗುವುದಕ್ಕೆ ಬಂದಿದ್ದುದಾಗಿಯೂ, ಶಶಿಭೂಷಣ ನಿಷ್ಕಾರಣವಾಗಿ ಕೋಪಗೊಂಡು ಪೋಲೀಸ್ ಪ್ಯಾದೆಗಳನ್ನು ತೊಂದರೆಪಡಿಸುತಿದ್ದುದನ್ನು ತಾವು ಕಂಡೆವೆಂದೂ ಸಾಕ್ಷಿ ಹೇಳಿದರು.

ಬೈಗಳನ್ನು ಕೇಳಿ ದೋಣಿಯೊಳಕ್ಕೆ ಹೋಗಿ ತಾನು ಸಾಹೇಬರನ್ನು ಹೊಡೆದನೆಂದು ಶಶಿಭೂಷಣ ಒಪ್ಪಿಕೊಂಡಿದ್ದ. ಆದರೆ ಬಲೆ ಕತ್ತರಿಸಿ ಬಿಸುಟದ್ದೂ, ಬೆಸ್ತರನ್ನು ಹಿಂಸಿಸಿದ್ದೂ ಅದಕ್ಕೆ ಕಾರಣವೆಂದು ಹೇಳಿದನು.

ಇಂತಹ ಸ್ಥಿತಿಯಲ್ಲಿ ಶಶಿಭೂಷಣನಿಗೆ ಯಾವ ಬಗೆಯ ಶಿಕ್ಷೆಯಾಯಿತೋ ಅದನ್ನು ಅನ್ಯಾಯವೆನ್ನಲು ಎಡೆಯಿಲ್ಲ ಅದರಿಂದಲೇ ಶಾಸ್ತಿ ಬಲವಾಗಿತ್ತು. ಮೂರು ನಾಲ್ಕು ಛಾರ್ಜುಗಳು, ಹೊಡೆದದ್ದು, ಅತಿಕ್ರಮ ಪ್ರವೇಶ, ಪೋಲೀಸರ ಕರ್ತವ್ಯದಲ್ಲಿ ಅಡ್ಡಿ, ಇತ್ಯಾದಿ—ಎಲ್ಲದರಲ್ಲೂ ಅವನಿಗೆ ವಿರೋಧವಾಗಿ ಬೇಕಾದಷ್ಟು ಸಾಕ್ಷಿ ಸಿಕ್ಕಿತು.

ಶಶಿಭೂಷಣ ತನ್ನ ಆ ಸಣ್ಣ ಕೋಣೆಯಲ್ಲಿ ತನ್ನ ಪ್ರಿಯ ಪುಸ್ತಕಗಳನ್ನು ಬಿಟ್ಟು ಐದು ವರ್ಷ ಜೈಲಿನಲ್ಲಿ ಕಳೆಯಬೇಕಾಯಿತು. ಅವರ ತಂದೆ ಅಪೀಲು ಮಾಡಲುದ್ಯುಕ್ತರಾದರು. ಅವರನ್ನು ಶಶಿಭೂಷಣ ಬಾರಿಬಾರಿಗೆ ತಡೆದನು. ಜೈಲೇ ಉತ್ತಮ! ಕಬ್ಬಿಣದ ಬೇಡಿ ಸುಳ್ಳು ಹೇಳದು. ಆದರೆ ಜೈಲಿನ ಹೊರಗಡೆ ಇರುವ ಸ್ವಾಧೀನತೆ ಅದು ನಮ್ಮನ್ನು ಮೋಸಗೊಳಿಸಿ ವಿಪತ್ತಿನಲ್ಲಿ ದೂಡುವದು. ಇನ್ನು ಸತ್ಸಂಗದ ಸಂಗತಿ ಹೇಳುವಿರಾದರೆ ಜೈಲಿನಲ್ಲಿ ಸುಳ್ಳು ಹೇಳುವ ಕೃತಘ್ನ ಕಾಪುರುಷರ ಸಂಖ್ಯೆ ಕಡಮೆ. ಯಾಕೆಂದರೆ—ಸ್ಥಳ ಸ್ವಲ್ಪವೇ—ಹೊರಗೆ ಬಹಳ ಹೆಚ್ಚು—ಎಂದನು.

## ದಶಮ ಪರಿಚ್ಛೇದ

ಶಶಿಭೂಷಣ ಜೈಲಿಗೆ ಹೋದ ಕೆಲವು ದಿನಗಳಲ್ಲೇ ಅವನ ತಂದೆ ಕಾಲವಾದರು. ಅವನಿಗೆ ಹಿರಿಯರು ಬೇರೆ ಯಾರೂ ಇರಲಿಲ್ಲ ಒಡಹುಟ್ಟಿದವನೊಬ್ಬ ಬಹು ದಿನಗಳಿಂದ ಮಧ್ಯಪ್ರಾಂತ್ಯದಲ್ಲಿ ಕೆಲಸದಲ್ಲಿದ್ದ. ಸ್ವದೇಶಕ್ಕೆ ಬರುವುದರಿಂದ ಅವನಿಗೆ ಮೇಲ್ಕೆ ಆಗುವಂತೇನೂ ಇರಲಿಲ್ಲ ಅಲ್ಲೇ ಮನೆ ಮಠ ಮಾಡಿಕೊಂಡು ಆತ ಮಕ್ಕಳು ಮರಿಯೊಡನೆ ನೆಮ್ಮದಿಯಿಂದ ನೆಲಸಿದ್ದನು. ಊರಿನಲ್ಲಿದ್ದ ಅಷ್ಟಿಷ್ಟು ಆಸ್ತಿಯನ್ನು ಹರಕುಮಾರ ನಾನಾ ಸಂಚಿನಿಂದ ನುಂಗಿದನು.

ಜೈಲಿನಲ್ಲಿ ಹೆಚ್ಚು ಜನ ಬಂದೀವಾನರು ಅನುಭವಿಸಬೇಕಾಗಿದ್ದುದಕ್ಕಿಂತ ಹೆಚ್ಚು ಪಾಲು ಸಂಕಟ ಶಶಿಭೂಷಣನ ಪಾಲಿಗಿತ್ತು. ಆದರೂ ಐದು ವರ್ಷಗಳ ಕಾಲ ಕಳೆಯಿತು.

ಮತ್ತೊಮ್ಮೆ ಮಳೆಗಾಲದಲ್ಲಿ ಸವೆದ ಮೈ ಮತ್ತು ಶೂನ್ಯ ಹೃದಯದೊಡನೆ ಶಶಿಭೂಷಣ ಜೈಲುಗೋಡೆಯ ಹೊರಗೆ ಬಂದು ನಿಂತನು. ಸ್ವಾಧೀನತೆ ಹೊಂದಿದನು. ಆದರೆ ಅದನ್ನು ಬಿಟ್ಟು ಜೈಲಿನ ಹೊರಗೆ ಅವನಿಗೆ ಮತ್ತೆ ಯಾರೇ ಆಗಲಿ ಇಲ್ಲವೆ ಮತ್ತೆ ಏನೇ ಆಗಲಿ ಇರಲಿಲ್ಲ ಮನೆಯಿಲ್ಲದೆ, ತನ್ನವರಿಲ್ಲದೆ, ಸಮಾಜವಿಲ್ಲದೆ, ಅವನೊಬ್ಬನ ಪಕ್ಷಕ್ಕೆ ಇಷ್ಟು ದೊಡ್ಡ ಪ್ರಪಂಚ ಅತ್ಯಂತ ಶೂನ್ಯವಾಗಿತ್ತು.

ಜೀವನ ಯಾತ್ರೆಯ ಕಿತ್ತುಹೋದ ಸೂತ್ರವನ್ನು ಪುನಃ ಮತ್ತೆಲ್ಲಿಂದ ಆರಂಭಿಸಬೇಕು ಎಂಬ ವಿಷಯ ಯೋಚಿಸುತ್ತಿರಲು ಅವನಿದಿರಿನಲ್ಲಿ ಜೋಡಿ ಕುದುರೆ ಸಾರೋಟೊಂದು ಬಂದು ನಿಂತಿತು. ಒಬ್ಬ ಆಳು ಬಂದು "ತಮ್ಮ ಹೆಸರು ಶಶಿಭೂಷಣ ಬಾಬು ಎಂದೇನು?" ಎಂದು ಕೇಳಿದನು

ಆತ "ಹೌದು" ಎಂದನು

ಅವನು ಆಕ್ಷಣ ಸಾರೋಟಿನ ಕದ ತೆರೆದು ಅವನು ಹತ್ತುವುದನ್ನು ನಿರೀಕ್ಷಿಸಿ ನಿಂತಿದ್ದನು

ಆತ ಆಶ್ಚರ್ಯದೊಡನೆ—"ನಾನು ಎಲ್ಲಿಗೆ ಬರಬೇಕು" ಎಂದು ಕೇಳಿದನು.

ಆಳು:—"ನಮ್ಮ ಒಡೆಯರು ತಮ್ಮನ್ನು ಕರೆತರಲು ಹೇಳಿರುವರು" ಎಂದನು

ದಾರಿಹೋಕರ ಕುತೂಹಲಭರಿತ ದೃಷ್ಟಿ ಅಸಹನೀಯವಾಗಲು ಆತ ಅಲ್ಲಿ ಹೆಚ್ಚು ಚರ್ಚೆಗೆ ನಿಲ್ಲದೆ ಗಾಡಿ ಹತ್ತಿ ಕುಳಿತನು. ಇದರಲ್ಲೇನೋ ತಪ್ಪಾಗಿದೆ ಎಂದು ಯೋಚಿಸಿದನು. ಆದರೆ ಎಲ್ಲಾದರೊಂದು ಕಡೆ ಹೋಗ ಬೇಕಲ್ಲ ಹಾಗಿಲ್ಲ, ಈ ತಪ್ಪಿನ ಮೂಲಕವೇ ಹೊಸ ಬಾಳುವೆ ಆರಂಭ ವಾದರೂ ಆಗಲಿ ಎಂದು ಅಂದುಕೊಂಡನು.

ಆ ದಿನವೂ ಮೋಡ ಮತ್ತು ಬಿಸಿಲು ಆಕಾಶದಲ್ಲೆಲ್ಲ ಒಂದನ್ನೊಂದು ಬೇಟೆಯಾಡುತಿತ್ತು. ಹಾದಿಯ ಮಗ್ಗುಲ ಮಳೆಯ ನೀರು ತುಂಬಿದ ಅಚ್ಚಹಸುರಾದ ಗದ್ದೆಯ ಮೇಲೆ ನೆರಳು ಬೆಳಕು ವಿಚಿತ್ರವಾಗಿ ಕಾಣುತಿತ್ತು. ಸಂತೆಯಮೂಳದಲ್ಲಿ ದೊಡ್ಡದೊಂದು ರಥ ನಿಂತಿತ್ತು. ಅದರ ಹತ್ತಿರದಲ್ಲಿದ್ದ ಚಿಲ್ಲರೆ ಅಂಗಡಿಯ ಇದಿರಿನಲ್ಲಿ ವೈಷ್ಣವ ಭಿಕ್ಷುಕರ ಗುಂಪೊಂದು ತಂಬೂರಿ, ಜಾಗಟೆ, ತಾಳ ಮೇಳಗಳೊಡನೆ,

ಬಾರಯ್ಯ ಬಾ. ತಿರುಗಿ ಬಾ—ಓ ನಾಥ ಹಿಂದಿರುಗಿ ಬಾ
ನನ್ನ ಕ್ಷುಧಿತ ತೃಷಿತ ತಾಪಿತ ಚಿತ್ತಬಂಧುರದಲ್ಲಿ ಹಿಂದಿರುಗಿ ಬಾ

ಎಂದು ಹಾಡುತಿದ್ದನು.

ಗಾಡಿ ಮುಂದುವರಿಯಿತು ಕೀರ್ತನೆಯ ಸದ್ದು ಕ್ರಮೇಣ ದೂರದಿಂದ ದೂರವಾಗಿ ಕಿವಿಯನ್ನು ಪ್ರವೇಶಿಸುತಿತ್ತು.

ಓ ನಿಷ್ಠುರ ಹಿಂದಿರುಗಿ ಬಾ, ನನ್ನ ಕರುಣ ಕೋಮಲ ಬಾ.
ಓ ಸಜಲ-ಜಲದ ಸ್ನಿಗ್ಧ ಕಾಂತ ಹಿಂದಿರುಗಿ ಬಾ.

ಕೀರ್ತನೆಯ ಮಾತುಗಳು ಕ್ರಮೇಣ ಕ್ಷೀಣವಾಗಿ ಅಸ್ಫುಟವಾಗುತ್ತ ಬಂದಿತು. ಅರ್ಥವಾಗುತಿರಲಿಲ್ಲ ಆದರೆ ಹಾಡಿನ ಛಂದಸ್ಸನ್ನನುಸರಿಸಿ ಶಶಿಭೂಷಣನ ಹೃದಯ ಒಂದು ಬಗೆಯ ಆಂದೋಲನ ಮಾಡುತಿತ್ತು. ತನ್ನ ಮನಸ್ಸಿನಲ್ಲೇ ಗುಯ್‌ಗುಟ್ಟುತ್ತ ಪದಗಳ ಹಿಂದೆ ಪದಗಳನ್ನು ಜೋಡಿ ಸುತ್ತ ನಡೆದನು. ರಚನೆ ನಿಲ್ಲದೆ ನಡೆಯುತ್ತಲೇ ಇತ್ತು.

ನನ್ನ ನಿತ್ಯಸುಖನೆ ಹಿಂದಿರುಗಿ ಬಾ, ನನ್ನ ಚಿರದುಃಖ ಹಿಂದಿರುಗಿ ಬಾ
ನನ್ನೆಲ್ಲ ಸುಖದುಃಖ-ಮಂಥನ-ಧನ ಅಂತರ್ಯದಲ್ಲಿ ಹಿಂದಿರುಗಿ ಬಾ,
ನನ್ನ ಚಿರವಾಂಛಿತನೆ ಬಾ, ನನ್ನ ಚಿರ ಸಂಚಿತನೆ ಬಾ!

ಓ ಚಂಚಲ! ಹೇ ಚಿರಂತನ! ಭುಜಬಂಧನದಲ್ಲಿ ಹಿಂದಿರುಗಿ ಬಾ,
ನನ್ನ ಶಯನದಲ್ಲಿ, ಸ್ವಪ್ನದಲ್ಲಿ, ನನ್ನ ಕಣ್ಣಿನಲ್ಲಿ ಹಿಂದಿರುಗಿ ಬಾ!
ನನ್ನ ಮುಖದ ನಗುವಿನಲ್ಲಿ ಬಾರಯ್ಯ,
ನನ್ನ ಕಣ್ಣ ಸಲಿಲದಲ್ಲಿ ಬಾರೋ
ನನ್ನ ಆದರದಲ್ಲಿ, ನನ್ನ ಛಲನೆಯಲ್ಲಿ,
ನನ್ನ ಅಭಿಮಾನದಲ್ಲಿ ಹಿಂದಿರುಗಿ ಬಾರೊ!
ನನ್ನ ಸರ್ವ ಸ್ಮರಣೆಯಲ್ಲಿ ಬಾ! ಸರ್ವ ಭ್ರಮೆಯಲ್ಲಿ ಬಾ
ನನ್ನ ಧರ್ಮ ಕರ್ಮ ಸೌಭಾಗ್ಯನಾಚಿಕೆ ಜನ್ಮ ಮರಣದಲ್ಲಿ ಬಾರಯ್ಯಾ!

ಗಾಡಿ ಮೋಟುಗೋಡೆ ಸುತ್ತುವರಿದ ತೋಟವೊಂದನ್ನು ಹೊಕ್ಕು ಎರಡುಂತಸ್ತಿನ ಮನೆಯೊಂದರ ಇದಿರಿನಲ್ಲಿ ನಿಲ್ಲಲು, ಆಗ ಶಶಿಭೂಷಣನ ಸಂಗೀತ ನಿಂತಿತು

ಅವನು ಏನೂ ಪ್ರಶ್ನಿಸದೆ [illegible] ತೋರಿಸಿದಂತೆ ಮನೆಯೊಳಕ್ಕೆ ಹೋದನು.

ಯಾವ ಕೋಣೆಯಲ್ಲಿ ಬಂದು ಕುಳಿತನೋ ಅದರಲ್ಲಿ ನಾಲ್ಕು ದಿಕ್ಕಿನಲ್ಲೂ ದೊಡ್ಡ ದೊಡ್ಡ ಕನ್ನಡಿಯ ಬೀರುಗಳಲ್ಲಿ ವಿಚಿತ್ರ ವರ್ಣದ ವಿಚಿತ್ರ ಹೊದಿಕೆಯ ಪುಸ್ತಕಗಳು ಸಾಲುಸಾಲಾಗಿ ಇದ್ದುವು ಆ ನೋಟ ಕಂಡೊಡನೆ ಅವನ ಪುರಾತನ ಜೀವನ ಎರಡನೆಯ ಬಾರಿ ಕಾರಾಗೃಹದಿಂದ ಬಿಡುಗಡೆ ಹೊಂದಿತು. ಚಿನ್ನದ ಅಕ್ಷರಗಳಿಂದ ನಾನಾವರ್ಣಗಳಲ್ಲಿ ಹೆಸರು ಬರೆದಿದ್ದ ಪುಸ್ತಕಗಳು ಆನಂದಲೋಕದಲ್ಲಿ ಪ್ರವೇಶಿಸಲು ಸುಪರಿಚಿತ ರತ್ನಖಚಿತ ಸಿಂಹದ್ವಾರದಂತೆ ಅವನಿಗೆ ತೋರುತ್ತಿತ್ತು.

ಮೇಜಿನಮೇಲೂ ಏನೇನೋ ಇತ್ತು. ಶಶಿಭೂಷಣ ತನ್ನ ಕ್ಷೀಣ ದೃಷ್ಟಿ ಬೀರಿ ಬಗ್ಗಿ ನೋಡಿದನು. ಒಂದು ಮುರಿದ ಸ್ಲೇಟು, ಅದರಮೇಲೆ ಕೆಲವು ಹಳೆಯ ಪುಸ್ತಕಗಳು, ಒಂದು ಹರಕಲು ಮಗ್ಗಿ ಪುಸ್ತಕ, ಕಥಾಮಾಲೆ ಮತ್ತು ಒಂದು ಪ್ರತಿ ಕಾಶೀ ರಾಮದಾಸನ ಮಹಾಭಾರತ ಇತ್ತು.

ಸ್ಲೇಟಿನ ಮರದ ಚೌಕಟಿನ ಮೇಲೆ ಶಶಿಭೂಷಣನ ಕೈಬರಹದಲ್ಲಿ, ಶಾಯಿಯಲ್ಲಿ ದಪ್ಪ ಅಕ್ಷರಗಳಲ್ಲಿ—ಗಿರಿಬಾಲಾ ದೇವೀ ಎಂದು ಬರೆದಿತ್ತು. ಹಾಗೆಯೇ ಪುಸ್ತಕಗಳಮೇಲೂ ಈ ಕೈಬರಹದಲ್ಲಿ ಈ ಒಂದು ಹೆಸರು ಬರೆದಿತ್ತು.

ಶಶಿಭೂಷಣನಿಗೆ ತಾನು ಎಲ್ಲಿಗೆ ಬಂದಿರುವೆನೆಂಬುದು ಅರಿವಾಯಿತು. ಅವನ ಹೃದಯದಲ್ಲಿ ರಕ್ತದ ಓಟ ಇಮ್ಮಡಿಯಾಯಿತು. ತೆರೆದ ಕಿಟಕಿಯ ಮೂಲಕ ಹೊರಗೆ ನೋಡಿದನು. ಅಲ್ಲೇನು ದೃಷ್ಟಿಗೆ ಗೋಚರಿಸಿತು? ಸಲಾಕಿ ಹಾಕಿದ ಆ ಸಣ್ಣ ಕೊಟಡಿ—ಆ ಡೋರಿಯಾ ಬಟ್ಟೆ ಉಟ್ಟ ಸಣ್ಣ ಹುಡುಗಿ ಮತ್ತು ತನ್ನ ಆ ಶಾಂತಿಮಯ ನಿಶ್ಚಿಂತ ನಿಭೃತ ಜೀವನ ಯಾತ್ರೆ.

ಅಂದಿನ ಆ ಸುಖದ ಜೀವನ ಏನೇನೋ ಅಸಾಮಾನ್ಯ ಅಥವಾ ಅತ್ಯಧಿಕ ವಾಗಿರಲಿಲ್ಲ. ದಿನದಮೇಲೆ ದಿನಗಳು ಕ್ಷುದ್ರ ಕೆಲಸದಲ್ಲಿ ಕ್ಷುದ್ರ ಸುಖದಲ್ಲಿ ಅರಿವಾಗದೆಯೇ ಕಳೆದುಹೋಗುತಿತ್ತು. ಮತ್ತು ಅವನ ಸ್ವಂತ ಅಧ್ಯಯನದ ನಡುವೆ ವಿದ್ಯಾರ್ಥಿನಿ ಹುಡುಗಿಯೊಬ್ಬಳ ಅಧ್ಯಾಪನ ತುಚ್ಛ ಘಟನೆಗಳಲ್ಲಿ ಒಂದಾಗಿ ಎಣಿಸಲಾಗಿತ್ತು. ಆದರೆ ಹಳ್ಳಿಯೊಳಗಿನ ಆ ನಿರ್ಜನ ದಿನಯಾಪನೆ ಆ ತುಚ್ಛ ಶಾಂತಿ, ಆ ಕ್ಷುದ್ರ ಸುಖ, ಆ ಕ್ಷುದ್ರ ಬಾಲೆಯ ಕ್ಷುದ್ರ ಮುಖ ಎಲ್ಲವೂ ಸ್ವರ್ಗದಂತೆ ದೇಶಕಾಲದ ಹೊರಗೆ ಎಲ್ಲೆಯನ್ನು ಅತಿಕ್ರಮಿಸಿ ಆಸೆಯ ರಾಜ್ಯದ ಕಲ್ಪನೆಯ ಛಾಯೆಯ ನಡುವೆ ವಿರಾಜಿಸತೊಡಗಿತು. ಅಂದಿನ ಆ ಎಲ್ಲ ನೋಟ ಮತ್ತು ನೆನಪು ಇಂದಿನ ಈ ಮಳೆಯಿಂದ ಮಂಕಾದ ಬೆಳಗಿನ ಆ ಬೆಳಕಿನ ಸಂಗತ ಮನಸ್ಸಿನ ಮಧ್ಯೆ ಮೃದುಗುಂಜಿತವಾಗುತಿದ್ದ ಆ ಕೀರ್ತನೆಯ ಹಾಡಿನ ಸಂಗಡ ಬೆರೆತು ಒಂದು ಬಗೆಯ ಸಂಗೀತಮಯ ಜ್ಯೋತಿರ್ಮಯ ಅಪೂರ್ವ ರೂಪ ಧರಿಸಿತು. ಆ ಕಾಡಿನಿಂದ ಸುತ್ತುವರಿದ ಕೆಸರು ತುಂಬಿದ ಕಿರಿದಾದ ಹಳ್ಳಿಯ ಹಾದಿಯಲ್ಲಿ ಆ ಅನಾದೃತ ವ್ಯಥಿತ ಬಾಲಿಕೆಯ ಅಭಿಮಾನ-ಮಲಿನ ಮುಖದ ಕೊನೆಯ ನೆನಪು ವಿಧಾತ ರಚಿಸಿದ ಒಂದು ಅಸಾಧಾರಣ ಆಶ್ಚರ್ಯ ಅಪೂರ್ವ ರೂಪ ಧರಿಸಿ ಅತಿ ಗಭೀರ ಅತಿ ವೇದನೆಯಿಂದ ಪರಿಪೂರ್ಣವಾದ ಸ್ವರ್ಗಲೋಕದ ಚಿತ್ರದಂತೆ ಅವನ ಮಾನಸಪಟದಲ್ಲಿ ಪ್ರತಿಫಲವಾಯಿತು. ಅದರ ಸಂಗಡಲೇ ಕೀರ್ತನೆಯ ಕರುಣಸ್ವರ ಬಾಜಿಸತೊಡಗಿತು. ಆ ಹಳ್ಳಿಯ ಹೆಣ್ಣಿನ ಮುಖದಮೇಲೆ ಸಮಸ್ತ ವಿಶ್ವಹೃದಯದ ಅನಿರ್ವಚನೀಯವಾದೊಂದು ದುಃಖ ತನ್ನ ನೆರ ಳನ್ನು ಬೀಳಿಸುವಂತಿತ್ತು. ಶಶಿಭೂಷಣ ಎರಡು ಕೈಗಳ ನಡುವೆ ಮುಖ ಮುಚ್ಚಿಕೊಂಡು ಆ ಮೇಜಿನಮೇಲೆ ಆ ಸ್ಲೇಟು ಪುಸ್ತಕಗಳ ಮೇಲೆ ಮುಖ

ಇಟ್ಟುಕೊಂಡು ಬಹು ದಿನಗಳ ಅನಂತರ ಬಹು ಹಿಂದಿನ ಕನಸನ್ನು ಕಾಣ ತೊಡಗಿದನು.

ಬಹಳ ಹೊತ್ತಿನ ಅನಂತರ ಮೃದು ಶಬ್ದದಿಂದ ಚಕಿತನಾಗಿ ತಲೆಯೆತ್ತಿ ನೋಡಿದನು. ಅವನ ಇದಿರಿನಲ್ಲಿ ಬೆಳ್ಳಿಯ ತಟ್ಟೆಯಲ್ಲಿ ಹಣ್ಣುಹಂಪಲು ಮಿಠಾಯಿ ಇಟ್ಟು ಗಿರಿಬಾಲೆ ಸಮೀಪದಲ್ಲಿ ಸದ್ದಿಲ್ಲದೆ ನಿಂತಿದ್ದಳು. ಆತ ತಲೆಯೆತ್ತಿದೊಡನೆ ಮೈಮೇಲೆ ಒಡವೆ ಇಲ್ಲದೆ ಬಿಳಿಯ ಸೀರೆ ಉಟ್ಟು ವಿಧವೆಯ ವೇಷ ಧರಿಸಿದ್ದ ಗಿರಿಬಾಲೆ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು.

ವಿಧವೆ ಎದ್ದು ನಿಂತು ಶೀರ್ಣಮುಖ ಮಲಿನವರ್ಣ ಭಗ್ನಶರೀರದ ಶಶಿಭೂಷಣನ ಕಡೆ ಕರುಣಾಸ್ನಿಗ್ಧ ನೇತ್ರದಿಂದ ದಿಟ್ಟಿಸಿ ನೋಡಿದಳು—ಆಗ ಅವಳೆರಡು ಕಣ್ಣುಗಳಿಂದ ಎರಡು ಕೆನ್ನೆಗಳಮೇಲೆ ಕಣ್ಣೀರು ಹರಿಯ ತೊಡಗಿತು.

ಶಶಿಭೂಷಣ ಅವಳ ಕುಶಲ ಪ್ರಶ್ನೆ ಮಾಡಲೆತ್ನಿಸಿದನು. ಆದರೆ ಮಾತೇ ಹೊರಡಲಿಲ್ಲ. ತಡೆಯಿಲ್ಲದ ಕಣ್ಣೀರು ಅವನ ಮಾತಿನ ಮಾರ್ಗವನ್ನು ತಡೆಗಟ್ಟಿತು. ಮಾತು ಮತ್ತು ಕಣ್ಣೀರು ಎರಡೂ ನಿರುಪಾಯಭಾವದಿಂದ ಹೃದಯದ ಮುಂದೆ ಕಂಠದ ದ್ವಾರದಲ್ಲಿ ಅಡ್ಡಲಾಗಿ ನಿಂತಿತು. ಆ ಕೀರ್ತನಕಾರರ ದಳ ಭಿಕ್ಷೆ ಸಂಗ್ರಹಿಸುತ್ತ ಸಂಗ್ರಹಿಸುತ್ತ ಮಹಡಿಯ ಮನೆಯ ಇದಿರಿನಲ್ಲಿ ಬಂದು ನಿಂತರು ಮತ್ತು 'ಬಾರಯ್ಯ—ಬಾರೋ—' ಎಂದು ಪುನಃಪುನಃ ಹೇಳುತ್ತ ಹಾಡುತಿದ್ದರು.

(ಕ್ರಿ. ಶ. ೧೮೯೪)

# ಪುಷ್ಪ ಬುದ್ಧಿಯುವರ ಪುನರ್ಜನ್ಮ

## ೧

ರಾಯ್‌ಚರಣ ಮೊಟ್ಟಮೊದಲು ಬಾಬುಗಳ ಮನೆಯಲ್ಲಿ ಕೆಲಸಕ್ಕೆ ಸೇರಿದಾಗ ಅವನ ವಯಸ್ಸು ಹನ್ನೊಂದು. ಯಶೋಹರ್ ಜಿಲ್ಲೆಯಲ್ಲಿ ಅವನ ಊರು ನೀಳವಾದ ತಲೆಗೂದಲು, ದೊಡ್ಡ ದೊಡ್ಡ ಕಣ್ಣುಗಳು. ಕರ್‍ರಗೆ ಥಳಥಳಿಸುವ ದೃಢಶರೀರದ ಹುಡುಗ. ಜಾತಿಯಲ್ಲಿ ಕಾಯಸ್ಥ. ಅವನ ಒಡೆಯರುಗಳೂ ಕಾಯಸ್ಥರೇ. ಬಾಬುಗಳ ಒಂದು ವರ್ಷ ವಯಸ್ಸಿನ ಮಗುವೊಂದನ್ನು ಸಾಕುವುದರಲ್ಲಿ ಸಹಾಯಮಾಡುವುದು ಅವನ ಮುಖ್ಯ ಕರ್ತವ್ಯವಾಗಿತ್ತು.

ಆ ಮಗು ರಾಯ್‌ಚರಣನ ಕಂಕುಳನ್ನು ಬಿಟ್ಟು ಸ್ಕೂಲು, ಸ್ಕೂಲಿನಿಂದ ಕಾಲೇಜ ; ಕೊನೆಗೆ ಕಾಲೇಜು ಬಿಟ್ಟು ಮುನ್ಸಿಫ್‌ಗಿರಿಗೆ ಕಾಲಿಟ್ಟನು. ರಾಯ್‌ಚರಣ ಈಗಲೂ ಅವನ ಆಳಾಗಿದ್ದ.

ಅವನಿಗೆ ಮತ್ತೊಬ್ಬ ಯಜಮಾನರು ಹೆಚ್ಚಿದರು. ಯಜಮಾನಿ ಮನೆಗೆ ಬಂದಳು ಅನುಕೂಲ್ ಬಾಬುಗಳ ಮೇಲೆ ಇದುವರೆಗೆ ರಾಯ್‌ಚರಣನ ಅಧಿಕಾರವೆಷ್ಟಿತ್ತೋ ಅದರ ಬಹು ಭಾಗ ಹೊಸ ಯಜಮಾನಿಯ ಕೈಸೇರಿತು

ಆದರೆ ಯಜಮಾನಿ ರಾಯ್‌ಚರಣನ ಹಿಂದಿನ ಅಧಿಕಾರ ಕಸಿದುಕೊಂಡದ್ದಕ್ಕೆ ಬದಲಾಗಿ ಹೊಸದೊಂದು ಅಧಿಕಾರ ಹೊರಿಸಿ ಸರಿದೂಗಿಸಿದ್ದಳು. ಅನುಕೂಲ್ ಬಾಬುಗಳಿಗೆ ಗಂಡು ಮಗು ಹುಟ್ಟಿ ಸ್ವಲ್ಪ ದಿವಸಗಳಾಗಿದ್ದುವು ರಾಯ್‌ಚರಣ ತನ್ನ ಪ್ರಯತ್ನ ಮತ್ತು ಉದ್ಯೋಗದಿಂದ ಅವನನ್ನು ಸಂಪೂರ್ಣವಾಗಿ ವಶಪಡಿಸಿಕೊಂಡಿದ್ದನು.

ಅವನನ್ನು ಅತಿ ಉತ್ಸಾಹದೊಡನೆ ಕುಣಿಸುತಿದ್ದ. ಬಹಳ ನಿಪುಣತೆಯೊಡನೆ ಎರಡು ಕೈಗಳಿಂದ ಆಕಾಶದ ಕಡೆಗೆ ಎಸೆದು ಹಿಡಿದುಕೊಳ್ಳುತಿದ್ದ. ಅವನ ಮುಖದ ಹತ್ತಿರ ಸದ್ದಿನೊಡನೆ ತಲೆ ಆಡಿಸುತಿದ್ದ. ಯಾವ ಬಗೆಯ ಉತ್ತರವನ್ನೂ ನಿರೀಕ್ಷಿಸದೆ ಸಂಪೂರ್ಣವಾಗಿ ಅರ್ಥವಿಲ್ಲದ ಅಸಂಗತ ಪ್ರಶ್ನೆ

ಗಳನ್ನು ರಾಗವಾಗಿ ಕೇಳುತ್ತಿದ್ದ. ಆ ಮಗು ರಾಯ್‌ಚರಣನನ್ನು ಕಂಡೊಡನೆ ಪುಳಕಗೊಂಡು ನಗುತ್ತಿತ್ತು.

ಕೊನೆಗೆ ಹುಡುಗ ಅಂಬೆಗಾಲಿಟ್ಟು ಬಹಳ ಎಚ್ಚರಿಕೆಯಿಂದ ಹೊಸಿಲು ದಾಟುತ್ತಿದ್ದ. ಯಾರಾದರೂ ಹಿಡಿದುಕೊಳ್ಳಲು ಬಂದರೆ ಕಿಲಕಿಲನೆ ನಕ್ಕು ವೇಗವಾಗಿ ನಿರಾಪದವಾದೆಡೆಯಲ್ಲಿ ಅವಿತುಕೊಳ್ಳಲು ಯತ್ನಿಸುತ್ತಿದ್ದ. ಆಗ ರಾಯ್‌ಚರಣ ಅವನ ಅಸಾಧಾರಣ ಚಾತುರ್ಯ ಮತ್ತು ವಿಚಾರಶಕ್ತಿ ಕಂಡು ಆಶ್ಚರ್ಯಪಡುತ್ತಿದ್ದ. ತಾಯಿಯ ಹತ್ತಿರ ಹೋಗಿ "ಅಮ್ಮಾ, ನಿಮ್ಮ ಮಗ ದೊಡ್ಡವನಾದರೆ ಜಡ್ಜಿಯಾಗುವ. ಐದು ಸಾವಿರ ರೂಪಾಯಿ ಸಂಪಾದಿಸುವ" ಎಂದು ಹೇಳುತ್ತಿದ್ದ.

ಪ್ರಪಂಚದಲ್ಲಿ ಬೇರೆ ಯಾವ ಮಗುವೇ ಆಗಲಿ ಈ ವಯಸ್ಸಿನಲ್ಲಿ ಹೊಸಲು ದಾಟುವುದೇ ಮೊದಲಾದ ಅಸಂಭವ ಚಾತುರ್ಯದ ಪರಿಚಯ ಕೊಡಬಲ್ಲುದೆಂಬ ವಿಷಯ ರಾಯ್‌ಚರಣನ ಯೋಚನೆಗೆ ಸಿಲುಕದಾಗಿತ್ತು. ಕೇವಲ ಜಡ್ಜಿಯಾಗಲಿರುವವನ ವಿಷಯದಲ್ಲಿ ಮಾತ್ರ ಯಾವುದೂ ಆಶ್ಚರ್ಯವಾಗಿರಲಿಲ್ಲ.

ಕೊನೆಗೆ ಮಗು ತಾರುಮಾರಾಗಿ ಹೆಜ್ಜೆ ಹಾಕುತ್ತ ನಡೆಯತೊಡಗಲು, ಅದೊಂದು ಆಶ್ಚರ್ಯದ ಘಟನೆಯಾಯಿತು. ಅಮ್ಮನನ್ನು 'ಮ್ಮಾ' ಎಂದೂ, ಅತ್ತೆಯನ್ನು 'ತೇ' ಎಂದೂ, ರಾಯ್‌ಚರಣನನ್ನು 'ಚನ್ನ' ಎಂದೂ ಮಾತನಾಡಿಸಲಾರಂಭಿಸಿದಾಗ ರಾಯ್‌ಚರಣ ಆ ಸಂಗತಿ ಸಿಕ್ಕಿಸಿಕ್ಕಿದವರೊಡನೆ ಹೇಳುತ್ತಿದ್ದ.

ಎಲ್ಲಕ್ಕಿಂತ ಆಶ್ಚರ್ಯದ ಸಂಗತಿಯೆಂದರೆ, ಅಮ್ಮನನ್ನು 'ಮ್ಮಾ' ಎಂದೂ ಅತ್ತೆಯನ್ನು 'ತೇ' ಎಂದೂ ಕರೆದು, ನನ್ನನ್ನು 'ಚನ್' ಎಂದು ಕರೆಯುತ್ತಾನಲ್ಲ. ಸಾಮಾನ್ಯ ಮಗುವಿನ ಮೆದುಳಿಗೆ ಇಂತಹ ಬುದ್ಧಿ ಹೇಗೆ ಲಭಿಸಿತು ಹೇಳಲು ಅಸಾಧ್ಯ ಎಂದು ಅನ್ನುವ. ವಯಸ್ಕನಾದವನೊಬ್ಬ ಈ ತರಹ ಸಾಮಾನ್ಯಸಂಗತಿ ತಿಳಿಸುತ್ತಿರಲಿಲ್ಲ. ಹಾಗೆ ತಿಳಿಸಿದರೂ ಜಡ್ಜಿಯ ಪದವಿ ಸಿಕ್ಕುವುದೆಂದು ಜನಗಳಿಗೆ ಸಂದೇಹವಾಗುತ್ತಲೂ ಇರಲಿಲ್ಲ.

ಕೆಲವು ದಿನಗಳ ಅನಂತರ ಬಾಯಲ್ಲಿ ಹಗ್ಗ ಕಚ್ಚಿಕೊಂಡು ರಾಯ್‌ಚರಣ ಕುದುರೆಯಾಗಬೇಕಾಯಿತು. ಜಟ್ಟಿಯಾಗಿ ಆ ಮಗುವಿನೊಡನೆ

ವಲ್ಲಯುದ್ಧ ಮಾಡಬೇಕಾಯಿತು. ಸೋತು ಭೂಮಿಯ ಮೇಲೆ ಬಿದ್ದು ಹೋಗದಿದ್ದರೆ ಮಹಾ ಗದ್ದಲವಾಗುತಿತ್ತು.

ಇದೇ ಸಮಯದಲ್ಲಿ ಅನುಕೂಲಬಾಬುಗಳಿಗೆ ಪದ್ಮಾತೀರದ ಜಿಲ್ಲೆಯೊಂದಕ್ಕೆ ವರ್ಗವಾಯಿತು. ಬಾಬುಗಳು ತಮ್ಮ ಮಗುವಿಗಾಗಿ ಕಲ್ಕತ್ತೆಯಿಂದ ಕೈಗಾಡಿಯೊಂದನ್ನು ತೆಗೆದುಕೊಂಡುಹೋದರು. ಮಖಮಲ್ ಅಂಗಿ ಮತ್ತು ತಲೆಯಮೇಲೆ ಜರಿಗೆಯ ಟೋಪಿ, ಕೈಯಲ್ಲಿ ಚಿನ್ನದ ಬಳೆ ಮತ್ತು ಕಾಲಿನಲ್ಲಿ ಎರಡು ಎಳೆ ಗೆಜ್ಜೆ ತೊಡಿಸಿ, ರಾಯ್‌ಚರಣ ನವಕುಮಾರನನ್ನು ಎರಡು ಹೊತ್ತೂ ಗಾಡಿಯಲ್ಲಿ ಗಾಳಿಸವಾರಿಗೆ ಕರೆದುಕೊಂಡು ಹೋಗುತಿದ್ದ.

ಮಳೆಗಾಲ ಬಂದಿತು. ಹಸಿದ ಪದ್ಮೆ ಉದ್ಯಾನವನ ಗ್ರಾಮ ಗದ್ದೆಗಳನ್ನು ಒಂದೊಂದಾಗಿ ಬಾಯಿಗೆ ಹಾಕಿಕೊಂಡಳು. ಮರಳುದಡದ ಮೇಲಿನ ಜೊಂಡು ಮತ್ತು ಕಾಡು ಸರ್ವೆ ಗಿಡಗಳು ನೀರಿನಲ್ಲಿ ಮುಳುಗಿದವು. ದಡ ಕುಸಿದು ಎಡೆಬಿಡದೆ ಆಗುತಿದ್ದ ಥಪ್ ಥಪ್ ಶಬ್ದ ಮತ್ತು ನೀರಿನ ಗರ್ಜನೆಯಿಂದ ಹತ್ತುದಿಕ್ಕುಗಳೂ ಪ್ರತಿಧ್ವನಿಸಿದವು ಅತಿವೇಗದಿಂದ ಓಡುತಿದ್ದ ನೊರೆಯ ರಾಶಿ ನದಿಯ ತೀವ್ರಗತಿಯನ್ನು ಪ್ರತ್ಯಕ್ಷಪಡಿಸಿ ತೋರುತಿತ್ತು.

ಮಧ್ಯಾಹ್ನ ಮೋಡ ಕವಿದಿತ್ತು ಆದರೆ ಮಳೆ ಬರುವ ಸಂದರ್ಭವೇನೂ ಕಾಣಲಿಲ್ಲ. ರಾಯ್‌ಚರಣನ ಚಂಚಲ ಸ್ವಭಾವದ ಚಿಕ್ಕ ಯಜಮಾನ ಯಾವ ರೀತಿಯಲ್ಲೂ ಮನೆಯಲ್ಲಿ ಇರದೆ ಹೋದನು. ಗಾಡಿ ಹತ್ತಿ ಕುಳಿತನು. ರಾಯ್‌ಚರಣ ಮೆಲ್ಲಮೆಲ್ಲನೆ ಗಾಡಿ ತಳ್ಳಿಕೊಂಡು ಭತ್ತದ ಗದ್ದೆಯ ಹತ್ತಿರ ನದಿಯ ದಡದಲ್ಲಿ ಬಂದು ನಿಂತನು. ನದಿಯಲ್ಲಿ ಒಂದಾದರೂ ನಾವೆ ಇರಲಿಲ್ಲ. ದಡದಲ್ಲಿ ಒಂದಾದರೂ ಮನುಷ್ಯಪ್ರಾಣಿ ಇರಲಿಲ್ಲ—ಮೋಡದ ಸಂದಿಯಿಂದ ಆಚೆಯ ದಡದಲ್ಲಿ ಜನಹೀನವಾದ ಮರಳುದಿಣ್ಣೆಯಲ್ಲಿ ಸದ್ದಿಲ್ಲದೆ ಹೊಳಪಿನೊಡನೆ ಸೂರ್ಯ ಮುಳುಗಲು ಹವಣಿಸುತಿದ್ದುದು ಕಾಣಿಸಿತು. ಆ ನಿಸ್ತಬ್ಧತೆಯ ನಡುವೆ ಮಗು ಥಟ್ಟನೆ ಒಂದು ಕಡೆಗೆ ಬೆರಳು ತೋರಿ 'ಚನ್ನ, ಹೂ' ಎಂದನು.

ಸ್ವಲ್ಪವೇ ದೂರದಲ್ಲಿ ಕೆಸರುಭೂಮಿಯಲ್ಲಿ ದೊಡ್ಡದೊಂದು ಕದಂಬ ವೃಕ್ಷದಮೇಲಿನ ಕೊಂಬೆಯಲ್ಲಿ ಕೆಲವು ಕದಂಬ ಪುಷ್ಪಗಳು ಅರಳಿದ್ದುವು.

ಎರಡು ಮೂರು ದಿನಗಳ ಹಿಂದೆ ರಾಯ್‌ಚರಣ ಕಡ್ಡಿಯಲ್ಲಿ ಪೋಣಿಸಿ ಕದಂಬ ಪುಷ್ಪಗಳ ಗಾಡಿ ಮಾಡಿಕೊಟ್ಟಿದ್ದನು. ಅದಕ್ಕೆ ದಾರ ಕಟ್ಟಿ ಎಳೆಯುವುದರಲ್ಲಿ ಅದೆಷ್ಟು ಆನಂದವಾಗಿತ್ತೆಂದರೆ ಆ ದಿನವೆಲ್ಲ ರಾಯ್‌ಚರಣ ಬಾಯಲ್ಲಿ ಲಗಾಮು ಕಚ್ಚಿಕೊಂಡು ಕುದುರೆಯಾಗಬೇಕಾಗಲಿಲ್ಲ. ಕುದುರೆಯಿಂದ ಅವನು ಒಮ್ಮೆಗೆ ಸೈಸಿನ ಪದವಿಗೆ ಉತ್ತೀರ್ಣನಾಗಿದ್ದ.

ಕೆಸರು ದಾಟಿ ಹೂ ಕೊಯ್ಯಹೋಗಲು ರಾಯ್‌ಚರಣನಿಗೆ ಮನಸಾಗಲಿಲ್ಲ. ತಕ್ಷಣ ಬೇರೆ ದಿಕ್ಕಿಗೆ ಕೈತೋರಿ "ನೋಡು, ನೋಡು" ಅದೋ ನೋಡು ಹಕ್ಕಿ—ಅದೊ ಹಾರಿಯೇ ಹೋಯಿತು. ಹಕ್ಕಿ—ಬಾ ಬಾ" ಎಂದು ಎಡೆಬಿಡದೆ ವಿಚಿತ್ರ ರೀತಿಯಲ್ಲಿ ಕೂಗುತ್ತ ವೇಗವಾಗಿ ಗಾಡಿ ತಳ್ಳ ತೊಡಗಿದನು.

ಆದರೆ ಮುಂದೆ ಜಡ್ಜಿಯಾಗಬಹುದಾದ ಸಂಭವವಿರುವ ಹುಡುಗನನ್ನು ಈ ಸಾಮಾನ್ಯ ಉಪಾಯದಿಂದ ಮರೆಸಲು ಯತ್ನಿಸುವುದು ವ್ಯರ್ಥ ಪ್ರಯತ್ನ. ವಿಶೇಷವಾಗಿ ನಾಲ್ಕುದಿಕ್ಕಿನಲ್ಲೂ ದೃಷ್ಟಿಯನ್ನಾಕರ್ಷಿಸುವ ವಸ್ತು ಏನೂ ಇರಲಿಲ್ಲ ಕಲ್ಪನೆಯ ಹಕ್ಕಿ ಹೆಚ್ಚು ಹೊತ್ತು ಪ್ರಯೋಜನವಾಗದು.

ರಾಯ್‌ಚರಣ ಆಗ "ಹಾಗಾದರೆ ನೀನು ಗಾಡಿಯಲ್ಲಿ ಕುಳಿತಿರು. ನಾನು ಛಟ್ಟನೆ ಹೋಗಿ ಹೂ ಕಿತ್ತು ತರುತ್ತೇನೆ. ಜೋಕೆ ನೀರಿನ ಹತ್ತಿರಕ್ಕೇನಾದರೂ ಹೋದೀಯೆ" ಎಂದು ಹೇಳಿ ಪಂಚೆ ಎತ್ತಿ ಕಟ್ಟಿ ಕದಂಬ ವೃಕ್ಷದ ಕಡೆಗೆ ಹೊರಟನು.

ಆದರೆ ನೀರಿನ ಕಡೆಗೆ ಹೋಗಬೇಡವೆಂದು ಅಪ್ಪಣೆಮಾಡಿ ಹೋಗಿದ್ದನಲ್ಲ, ಅದರಿಂದ ಮಗುವಿನ ಮನಸ್ಸು ಆ ಕ್ಷಣದಲ್ಲೇ ಕದಂಬ ವೃಕ್ಷದ ಕಡೆಯಿಂದ ನೀರಿನ ಕಡೆಗೆ ಹೋಯಿತು. ನೀರು ಛಲಛಲನೆ ಹರಿಯುತಿದ್ದುದನ್ನು ನೋಡಿತು. ತುಂಟತನಮಾಡಿ ಯಾವನೋ ಒಬ್ಬ ದೊಡ್ಡ ರಾಯ್‌ಚರಣನ ಹತ್ತಿರದಿಂದ ತಪ್ಪಿಸಿಕೊಂಡು ಲಕ್ಷಗಟ್ಟಲೆ ಮಕ್ಕಳ ಪ್ರವಾಹ ನಗುತ್ತ ಕೂಗಾಡುತ್ತ ಬೇಡವೆಂದಕಡೆಗೆ ಓಡ ಓಡ ಹೋಗುತಿರುವಂತೆ ಕಂಡಿತು.

ಅವರುಗಳ ಆ ತುಂಟ ದೃಷ್ಟಾಂತದಿಂದ ಈ ಮಾನವ ಶಿಶುವಿನ ಚಿತ್ತ ಚಂಚಲಗೊಂಡಿತು. ಗಾಡಿಯಿಂದ ಮೆಲ್ಲಮೆಲ್ಲನೆ ಇಳಿದು ನೀರಿನ ಕಡೆಗೆ ಹೋದನು—ಉದ್ದವಾದ ಕಡ್ಡಿಯೊಂದನ್ನು ಆರಿಸಿಕೊಂಡು ಅದನ್ನು ಗಾಳ

ವೆಂದು ಕಲ್ಪಿಸಿಕೊಂಡು ಬಗ್ಗಿ ವಿನಾನು ಹಿಡಿಯುತೊಡಗಿದನು. ತುಂಟ ಮಕ್ಕಳ ಸಮೂಹ ಈ ಮಗುವನ್ನು ಬಾರಿಬಾರಿಗೆ ತಮ್ಮ ಆಟದ ಮನೆಗೆ ಕರೆಯುತಿದ್ದುವು.

ಒಮ್ಮೆ ಧಪ್ ಎಂದು ಸದ್ದಾಯಿತು ಆದರೆ ತುಂಬಿದ ಪದ್ಮಾತೀರದಲ್ಲಿ ಇಂತಹ ಶಬ್ದಗಳು ಎಷ್ಟೋ ಕೇಳಿಬರುವವು ರಾಯ್‌ಚರಣ ಸೆರಗು ತುಂಬ ಹೂ ಕೊಯ್ದನು. ಗಿಡದಿಂದ ಇಳಿದು ನಗುಮುಖದೊಡನೆ ಗಾಡಿಯ ಬಳಿಗೆ ಬಂದು ನೋಡಲು ಯಾರೂ ಇರಲಿಲ್ಲ. ನಾಲ್ಕು ದಿಕ್ಕಿನಲ್ಲೂ ದಿಟ್ಟಿಸಿ ನೋಡಲು ಎಲ್ಲೂ ಯಾರ ಸುಳಿವೂ ಕಾಣಲಿಲ್ಲ.

ಮುಹೂರ್ತ ಮಾತ್ರದಲ್ಲಿ ರಾಯ್‌ಚರಣನ ರಕ್ತ ಹಿಮದಂತಾಯಿತು. ಇಡೀ ಪ್ರಪಂಚ ಮಲಿನ ವಿವರ್ಣ ಹೊಗೆಯಂತೆ ಆಗಿಬಿಟ್ಟಿತು. ಬಿರಿದ ಎದೆಯಿಂದ ಒಮ್ಮೆ ಪೂರ್ಣ ಪ್ರಯತ್ನದೊಡನೆ ಚೀತ್ಕಾರಮಾಡಿ—ಸಾವಿನಾ, ಪುಟ್ಟ ಬುದ್ಧೀ—ಕಂದಾ—ಅಣ್ಣಾ—ಎಂದು ಮಂತಾಗಿ ಕೂಗಿಕೊಂಡನು.

ಆದರೆ 'ಚನ್ನ' ಎಂದು ಯಾರೂ ಉತ್ತರ ಕೊಡಲಿಲ್ಲ. ತುಂಟತನ ಮಾಡಿದ ಯಾವ ಮಗುವಿನ ಕಂಠದ ಹಾಸ್ಯದ ಧ್ವನಿಯೂ ಕೇಳಿಸಲಿಲ್ಲ. ಪದ್ಮೆ ಮಾತ್ರ ಮೊದಲಿನಂತೆಯೇ ಛಲ್‌ಛಲ್ ಕಲಕಲ ನಾದದೊಡನೆ ಹರಿಯುತಿತ್ತು. ತಾನು ಏನನ್ನೂ ಅರಿಯದಂತೆಯೂ, ಪ್ರಪಂಚದ ಈ ಸಾಮಾನ್ಯ ಘಟನೆಗಳನ್ನು ಗಮನಿಸಲು ತನಗೆ ಮುಹೂರ್ತ ಮಾತ್ರವೂ ಅವಕಾಶವಿಲ್ಲದಂತೆಯೂ ಅದು ಕಾಣಿಸುತಿತ್ತು.

ಸಂಜೆಯಾಗುತ್ತ ಬರಲು ಉತ್ಕಂಠಿತೆಯಾದ ತಾಯಿ ನಾಲ್ಕು ದಿಕ್ಕಿನಲ್ಲೂ ಜನರನ್ನು ಕಳುಹಿಸಿದಳು ಕೈಯಲ್ಲಿ ಲಾಂದ್ರ ಹಿಡಿದುಕೊಂಡು ಜನ ನದೀತೀರದಲ್ಲಿ ಬಂದು ನೋಡಿದಾಗ ರಾಯ್‌ಚರಣ–ಸಾವಿನಾ, ಪುಟ್ಟ ಬುದ್ಧೀ–ಎಂದು ಗಂಟಲೊಡೆವ ದನಿಯಲ್ಲಿ ಕೂಗಿಕೊಂಡು ತಿರುಗುತಿದ್ದುದನ್ನು ಕಂಡರು ಕೊನೆಗೆ ಮನೆಗೆ ಹಿಂದಿರುಗಿ ರಾಯ್‌ಚರಣ ಧೊಪ್ಪನೆ ಯಜಮಾನಿಯ ಕಾಲಬಳಿ ಬಿದ್ದುಕೊಂಡನು ಅವನನ್ನು ಎಷ್ಟು ಕೇಳಿದರೂ 'ನಾನು ಅರಿಯೆ—ಗೊತ್ತಿಲ್ಲ' ಎಂದು ಉತ್ತರ ಕೊಟ್ಟನು.

ಈ ಕೆಲಸ ಪದ್ಮೆಯದೆಂದೇ ಎಲ್ಲರೂ ತಿಳಿದುಕೊಂಡಿದ್ದರೂ ಕೂಡ ಹಳ್ಳಿಯ ಅರುಗಿನಲ್ಲಿ ಬೀಡು ಬಿಟ್ಟಿದ್ದ ಕೊರಮರ ಗುಂಪೊಂದರಮೇಲೆ

ಸಂದೇಹಪಡದಿರಲಿಲ್ಲ. ಒಂದು ಸಮಯ ರಾಯ್‌ಚರಣನೇ ಕಳ್ಳತನ ಮಾಡಿದ್ದರೂ ಇರಬಹುದೆಂದು ಯಜಮಾನಿಯ ಮನಸ್ಸಿಗೆ ಸಂದೇಹವಾಯಿತು. ಹೆಚ್ಚೇಕೆ ಅವನನ್ನು ಕರೆದು ಅತ್ಯಂತ ಅನುನಯದೊಡನೆ—"ನೀನು ನನ್ನ ಮಗುವನ್ನು ಹಿಂದಕ್ಕೆ ತಂದುಕೊಡು. ನೀನು ಎಷ್ಟು ಹಣ ಬೇಡಿದರೂ ಕೊಡುತ್ತೇನೆ" ಎಂದಳು. ಈ ಮಾತುಗಳನ್ನು ಕೇಳಿ ರಾಯ್‌ಚರಣ ಸುಮ್ಮನೆ ತಲೆ ಚಚ್ಚಿಕೊಂಡನು. ಒಡತಿ ಅವನನ್ನು ಮನೆ ಬಿಟ್ಟು ಓಡಿಸಿಬಿಟ್ಟಳು.

ಅನುಕೂಲ್ ಬಾಬುಗಳು ತಮ್ಮ ಹೆಂಡತಿಯ ಮನಸ್ಸಿನಿಂದ ಈ ಅನ್ಯಾಯದ ಸಂದೇಹ ದೂರಪಡಿಸಲು ಯತ್ನಿಸಿದ್ದರು 'ರಾಯ್‌ಚರಣ ಇಂತಹ ಕೆಟ್ಟ ಕೆಲಸ ಯಾವ ಉದ್ದೇಶದಿಂದ ತಾನೆ ಮಾಡಿಯಾನು' ಎಂದು ಕೇಳಿದರು. 'ಯಾಕೆ ಮಗುವಿನ ಮೈಮೇಲೆ ಭಂಗಾರದ ಒಡವೆ ಇರಲಿಲ್ಲವೆ' ಎಂದು ಆಕೆ ಹೇಳಿದರು.

೨

ರಾಯ್‌ಚರಣ ಊರಿಗೆ ಹಿಂದಿರುಗಿ ಬಂದನು. ಇಷ್ಟು ದಿನಗಳು ಅವನಿಗೆ ಮಕ್ಕಳು ಮರಿ ಆಗಿರಲಿಲ್ಲ ಆಗುವ ಆಶೆಯೂ ಅಷ್ಟಾಗಿ ಕಾಣಿಸಿಂಲಿಲ್ಲ. ಆದರೆ ದೈವವಶಾತ್ ವರ್ಷವಾಗುವುದರೊಳಗೆ ಅವನ ಹೆಂಡತಿ ವೃದ್ಧ ವಯಸ್ಸಿನಲ್ಲಿ ಗಂಡು ಮಗು ಒಂದನ್ನು ಹೆತ್ತು ಇಹವ್ಯಾಪಾರ ಮುಗಿಸಿಕೊಂಡಳು.

ಹೊಸದಾಗಿ ಹುಟ್ಟಿದ ಈ ಮಗುವಿನ ವಿಷಯದಲ್ಲಿ ರಾಯ್‌ಚರಣನಲ್ಲಿ ಬಹಳ ದ್ವೇಷ ಮೂಡಿತು. ಇದು ವಂಚನೆಯಿಂದ 'ಪುಟ್ಟ ಬುದ್ಧಿ' ಯವರ ಸ್ಥಾನ ಆಕ್ರಮಿಸಲು ಬಂದಿದೆಯೆಂದು ಮನಸ್ಸಿನಲ್ಲಿ ಭಾವಿಸಿದನು. ಒಡೆಯನ ಒಬ್ಬನೇ ಒಬ್ಬ ಮಗನನ್ನು ನೀರಿನಲ್ಲಿ ತೇಲಬಿಟ್ಟು ತಾನು ಪುತ್ರಸುಖ ಅನುಭವಿಸುವುದು ಮಹಾ ಪಾಪಕಾರ್ಯವೆಂದು ಅಂದುಕೊಂಡನು. ರಾಯ್‌ಚರಣನ ವಿಧವೆ ಸೋದರಿ ಇಲ್ಲದಿದ್ದುದಾದರೆ ಈ ಮಗು ಪ್ರಪಂಚದ ವಾಯುವನ್ನು ಹೆಚ್ಚು ಕಾಲ ಅನುಭವಿಸುತಿರಲಿಲ್ಲ.

ಆಶ್ಚರ್ಯದ ಸಂಗತಿಯೆಂದರೆ, ಈ ಮಗುವೂ ಕೆಲವು ದಿನಗಳ ಅನಂತರ ಹೊಸಿಲು ದಾಟಲು ಆರಂಭಿಸಿತು, ಮತ್ತು ಎಲ್ಲ ರೀತಿಯ ನಿಷೇಧವನ್ನೂ

ಅಲಕ್ಷಿಸಿ ಆಶ್ಚರ್ಯವನ್ನುಂಟುಮಾಡುವ ಬುದ್ಧಿವಂತಿಕೆ ಪ್ರಕಟಿಸತೊಡಗಿತು. ಅಷ್ಟೇಕೆ—ಇದರ ಧ್ವನಿ, ನಗು, ಅಳು ಎಲ್ಲವೂ ಬಹುಮಟ್ಟಿಗೆ ಆ ಮಗುವಿನ ದರಂತೆಯೇ ಇತ್ತು ಒಂದೊಂದು ದಿನ ಇದರ ಅಳು ಕೇಳಿದಾಗ ರಾಯ್ ಚರಣನ ಎದೆ ಥಟ್ಟನೆ ನಿಂತುಹೋಗುತಿತ್ತು. ಚಿಕ್ಕ ಯಜಮಾನ ರಾಯ್ ಚರಣನಿಂದ ತಪ್ಪಿಸಿಕೊಂಡು ಎಲ್ಲಿಯೋ ಅಳುತಿರುವಂತೆ ಮನಸ್ಸಿಗೆ ತೋರುತಿತ್ತು.

ಫೇಲ್‌ನಾ*—ರಾಯ್‌ಚರಣನ ತಂಗಿ ಈ ಮಗುವಿಗೆ ಫೇಲ್‌ನಾ ಎಂದು ಹೆಸರಿಟ್ಟಿದ್ದಳು. ಕಾಲಕ್ರಮದಲ್ಲಿ ಅತ್ತೆಯನ್ನು ಅತ್ತೆ ಎಂದು ಕರೆದನು. ಆ ಪರಿಚಿತ ದನಿ ಕೇಳಿ ಒಂದು ದಿನ ಹಠಾತ್ತಾಗಿ ರಾಯ್‌ಚರಣನ ಮನಸ್ಸಿನಲ್ಲಿ—ಹಾಗಾದರೆ 'ಪುಟ್ಟ ಬುದ್ಧಿಗೆ' ನನ್ನಮೇಲಿನ ಮಾಯೆ ಬಿಡಲು ಆಗಲಿಲ್ಲ ಅವನಂತೂ ನನ್ನ ಮನೆಯಲ್ಲೇ ಒಂದು ಜನ್ಮವೆತ್ತಿರುವನು ಎಂದು ಅಂದುಕೊಂಡನು.

ಈ ನಂಬಿಕೆಗೆ ಅನುಕೂಲವಾಗಿ ಹಲವು ಅಖಂಡನೀಯ ಯುಕ್ತಿಗಳಿದ್ದುವು. ಒಂದನೆಯದಾಗಿ ಆ ಮಗು ಹೋದ ಕೆಲವೇ ದಿನಗಳಲ್ಲಿ ಇದು ಹುಟ್ಟಿತು ಎರಡನೆಯದಾಗಿ ಇದ್ದಕ್ಕಿದ್ದಂತೆ ತನ್ನ ಹೆಂಡತಿಯ ಗರ್ಭದಲ್ಲಿ ಸಂತಾನೋತ್ಪತ್ತಿ ಎನ್ನುವುದು ಖಂಡಿತ ಹೆಂಡತಿಯ ಅದೃಷ್ಟಮಾತ್ರದಿಂದ ಎನ್ನುವುದೂ ಸಾಧ್ಯವಿಲ್ಲ. ಮೂರನೆಯದಾಗಿ ಇವನೂ ಅಂಬೆಗಾಲಿಡುವನು, ತಾರುಮಾರಾಗಿ ನಡೆಯುವನು, ಅತ್ತೆಯನ್ನು 'ತೇ' ಎಂದು ಕರೆಯುತ್ತಾನೆ. ಯಾವ್ಯಾವ ಲಕ್ಷಣಗಳಿದ್ದರೆ ಮುಂದೆ ಜಡ್ಜಿಯಾಗುವ ಸಂಭವವಿದ್ದಿತೋ ಅವುಗಳಲ್ಲಿ ಅನೇಕ ಇವನಲ್ಲಿ ಕಂಡುಬಂದಿವೆ.

ಆಗ ಯಜಮಾನಿಯ ಆ ದಾರುಣ ಸಂದೇಹದ ಸಂಗತಿ ಹಠಾತ್ತಾಗಿ ನೆನಪಾಯಿತು—ಅಚ್ಚರಿಗೊಂಡವನಾಗಿ ಮನಸ್ಸಿನಲ್ಲೇ—"ಅಹಾ! ಹೆತ್ತ ಕರುಳಲ್ಲವೆ. ತನ್ನ ಮಗುವನ್ನು ಯಾರು ಕದ್ದಿರುವರೆಂದು ತಿಳಿದುಕೊಳ್ಳಲು ಸಾಧ್ಯವಾಯಿತು" ಎಂದನು. ಆಗ ಇಷ್ಟು ದಿನ ಮಗುವನ್ನು ಅಲಕ್ಷ್ಯ

---

* ಫೇಲ್‌ನಾ—ಬಿಸಾಡಲ್ಪಟ್ಟವನು. ಕನ್ನಡದಲ್ಲಿ 'ತಿಪ್ಪಯ್ಯ' ಎಂದಹಾಗೆ.

ಮಾಡಿದನಲ್ಲ ಅದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟನು ಪುನಃ ಮಗುವಿನ ಹತ್ತಿರ ವಶವಾದನು.

ಅಂದಿನಿಂದ ಫೇಲ್‌ನಾವನ್ನು ರಾಯ್‌ಚರಣ ದೊಡ್ಡ ಮನುಷ್ಯರ ಮಗುವಿನಂತೆ ಸಾಕತೊಡಗಿದನು. ಮಖಮಲ್ ಅಂಗಿ ಕೊಂಡುಕೊಟ್ಟನು. ಸರಿಗೆಯ ಟೋಪಿ ತಂದುಕೊಟ್ಟನು. ಸತ್ತ ಹೆಂಡತಿಯ ಒಡವೆ ಕರಗಿಸಿ ಕಾಪುಬಳೆಗಳನ್ನ ಮಾಡಿಸಿದನು. ನೆರೆಹೊರೆಯ ಯಾವ ಮಗುವಿನೊಡನೆಯೂ ಅವನನ್ನು ಕಲೆಯಗೊಡಲಿಲ್ಲ. ಹಗಲು ರಾತ್ರಿ ತಾನೇ ಅವನ ಆಟದ ಸಂಗಡಿಗನಾಗಿದ್ದನು. ನೆರೆಹೊರೆಯ ಹುಡುಗರು ಅವಕಾಶ ಸಿಕ್ಕಿದರೆ ಅವನನ್ನು 'ದೊರೇ ಮಗ, ನವಾಬರ ಮಗ' ಎಂದು ಹಾಸ್ಯಮಾಡುತ್ತಿದ್ದರು. ಊರ ಜನರು ರಾಯ್‌ಚರಣನ ಈ ಹುಚ್ಚು ನಡವಳಿಕೆ ನೋಡಿ ಆಶ್ಚರ್ಯಪಟ್ಟರು.

ಫೇಲ್‌ನಾವಿಗೆ ವಿದ್ಯಾಭ್ಯಾಸದ ವಯಸ್ಸಾಗಲು ರಾಯ್‌ಚರಣ ಆಗ ತನ್ನ ಮನೆಮಠವನ್ನೆಲ್ಲ ಮಾರಿ ಹುಡುಗನನ್ನು ಕಲ್ಕತ್ತೆಗೆ ಕರೆದುಕೊಂಡು ಹೋದನು. ಅಲ್ಲಿ ಬಹುಕಷ್ಟದಿಂದ ಒಂದು ಕೆಲಸ ಸಂಪಾದಿಸಿಕೊಂಡು ಫೇಲ್‌ನಾವನ್ನು ವಿದ್ಯಾಲಯಕ್ಕೆ ಕಳುಹಿಸಿದನು ತಾನು ಹೇಗೆ ಹೇಗೋ ಇರುತ್ತ ಹುಡುಗನಿಗೆ ಒಳ್ಳೆಯ ಊಟ, ಒಳ್ಳೆಯ ಉಡಿಗೆ, ಉತ್ತಮವಾದ ವಿದ್ಯೆ ಕೊಡಿಸುವುದಕ್ಕೆ ಹಿಂದೆಗೆಯಲಿಲ್ಲ "ಮಗು! ಪ್ರೀತಿಯಿಂದ ನನ್ನ ಮನೆಗೆ ಬಂದಿರುವೆಯೆಂದು ನಿನಗೆ ಯಾವ ತರಹದ ಕಷ್ಟವೂ ಒದಗದು" ಎಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತಿದ್ದ.

ಈ ರೀತಿಯಲ್ಲಿ ಹನ್ನೆರಡು ವರ್ಷಗಳು ಕಳೆದುವು ಹುಡುಗ ಓದು ಬರಹದಲ್ಲಿ ಗಟ್ಟಿಗನಾಗಿ, ನೋಡಲು ಅಂದವಾಗಿ ದೃಢಶರೀರವುಳ್ಳವನಾಗಿ, ತಲೆಗೂದಲು ಬಾಚಿ ಸರಿಪಡಿಸಿಕೊಳ್ಳುವುದರಲ್ಲಿ ಆಸಕ್ತಿಯುಳ್ಳವನೂ ಸುಖ ಸಂತೋಷಗಳನ್ನು ಬಯಸುವವನೂ ಆದ. ಅಪ್ಪನನ್ನು ಅಪ್ಪನಂತೆ ನೋಡಲಾರದವನಾದ. ಯಾಕೆಂದರೆ, ರಾಯ್‌ಚರಣ ಪ್ರೀತಿಯಲ್ಲಿ ತಂದೆಯಾಗಿಯೂ, ಸೇವೆಯಲ್ಲಿ ಭೃತ್ಯನಾಗಿಯೂ ಇದ್ದ. ಅಲ್ಲದೆ ಅವನಲ್ಲಿ ಮತ್ತೊಂದು ದೋಷವೂ ಇತ್ತು. ಅವನು ತಾನು ಫೇಲ್‌ನಾವಿನ ಅಪ್ಪನೆಂಬುದನ್ನು ಎಲ್ಲರ ಇದಿರಿನಲ್ಲೂ ಗುಟ್ಟಾಗಿ ಇಟ್ಟಿದ್ದನು. ಫೇಲ್‌ನಾ ವಾಸಿಸುತ್ತಿದ್ದ ವಿದ್ಯಾರ್ಥಿ

ನಿಲಯದಲ್ಲಿನ ವಿದ್ಯಾರ್ಥಿಗಳು ಮುದಿ ರಾಯ್‌ಚರಣನನ್ನು ಕುರಿತು ಸದಾ ತಮಾಷೆ ಮಾಡುತಿದ್ದರು. ತಂದೆ ಇದಿರಿನಲ್ಲಿಲ್ಲದ ವೇಳೆಯಲ್ಲಿ ಫೇಲ್‌ನಾ ಕೂಡ ಈ ತಮಾಷೆಯ ಮಾತುಕಥೆಗಳಲ್ಲಿ ಭಾಗ ವಹಿಸುತಿರಲಿಲ್ಲವೆಂದು ಹೇಳ ಲಾಗುವುದಿಲ್ಲ ಆದರೂ ನಿಷ್ಕಪಟ ವಾತ್ಸಲ್ಯ ಸ್ವಭಾವದ ರಾಯ್‌ಚರಣನನ್ನು ಎಲ್ಲರೂ ಪ್ರೀತಿಸುತಿದ್ದರು. ಫೇಲ್‌ನಾವೂ ಪ್ರೀತಿಸುತಿದ್ದ. ಆದರೆ ಸರಿಯಾಗಿ ತಂದೆಯಂತೆ ಅಲ್ಲ—ಅದರಲ್ಲಿ ಸ್ವಲ್ಪ ಅನುಗ್ರಹ ಕಲೆತಿತ್ತು ಎಂಬುದನ್ನು ಹಿಂದೆಯೇ ತಿಳಿಸಿದೆ.

ರಾಯ್‌ಚರಣ ಮುದುಕನಾಗುತ್ತ ಬಂದ ಅವನ ಯಜಮಾನ ಕೆಲಸ ಕಾರ್ಯದಲ್ಲಿ ಸದಾ ತಪ್ಪು ಹುಡುಕುತಿದ್ದ. ವಾಸ್ತವದಲ್ಲಿ ಅವನ ಮೈಯೂ ಶಿಥಿಲವಾಗುತ್ತ ಬಂದಿತ್ತು. ಕೆಲಸದಲ್ಲೂ ಅಷ್ಟಾಗಿ ಮನಸ್ಸಿಡುತ್ತಿರಲಿಲ್ಲ. ಸದಾ ಮರೆತುಹೋಗುತ್ತಿದ್ದ. ಆದರೆ ಪೂರ್ತಿ ಸಂಬಳ ಕೊಡುವ ಮನುಷ್ಯ ಮುದಿ ವಯಸ್ಸಿನ ಸಬೂಬು ಒಪ್ಪಲು ಬಯಸನು. ಇತ್ತ ರಾಯ್‌ಚರಣ ಆಸ್ತಿಪಾಸ್ತಿಯನ್ನೆಲ್ಲಾ ಮಾರಿ ತಂದಿದ್ದ ಹಣವೆಲ್ಲ ಮುಗಿಯುತ್ತ ಬಂದಿತು. ಫೇಲ್‌ನಾ ಈಗಿನ ಉಡಿಗೆ ತೊಡಿಗೆಗಳ ಅಭಾವವನ್ನು ಕುರಿತು ಸದಾ ಗೊಣ ಗುಟ್ಟಲಾರಂಭಿಸಿದನು.

೩

ಒಂದು ದಿನ ರಾಯ್‌ಚರಣ ಹಠಾತ್ತಾಗಿ ಕೆಲಸ ಬಿಟ್ಟನು. ಫೇಲ್ ನಾವಿಗೆ ಸ್ವಲ್ಪ ಹಣ ಕೊಟ್ಟು—"ಸಂದರ್ಭ ಒದಗಿದೆ, ಕೆಲವು ದಿನಗಳ ಮಟ್ಟಿಗೆ ಊರಿಗೆ ಹೋಗಿಬರುತ್ತೇನೆ" ಎಂದು ಹೇಳಿ ಬಾರಾಸೆಟ್ಟಿಗೆ ಹೋಗಿ ತಲುಪಿದನು. ಅನುಕೂಲ್ ಬಾಬುಗಳು ಆಗ ಅಲ್ಲಿ ಮುನ್ಸೀಫರಾಗಿದ್ದರು.

ಅನುಕೂಲನಿಗೆ ಮತ್ತೆ ಮಗು ಹುಟ್ಟಿರಲಿಲ್ಲ. ಮನೆಯಾಕೆ ಇನ್ನೂ ಮಗನ ದುಃಖವನ್ನು ವಕ್ಷದಲ್ಲಿ ಕಾಪಾಡಿಕೊಂಡು ಬಂದಿದ್ದಳು.

ಒಂದು ದಿನ ಸಂಜೆಯ ವೇಳೆಯಲ್ಲಿ ಬಾಬುಗಳು ಕಛೇರಿಯಿಂದ ಹಿಂದಿ ರುಗಿ ವಿಶ್ರಮಿಸಿಕೊಳ್ಳುತಿದ್ದರು. ಯಜಮಾನಿ ಸಂನ್ಯಾಸಿಯೊಬ್ಬನ ಹತ್ತಿರ ಸಂತಾನ ಬಯಸಿ ಬಹು ಬೆಲೆಯ ಮೂಲಿಕೆಯೊಂದನ್ನೂ ಆಶೀರ್ವಾದವನ್ನೂ ಕೊಂಡುಕೊಳ್ಳುತಿದ್ದಳು. ಈ ಸಮಯದಲ್ಲಿ ಅಂಗಳದಲ್ಲಿ 'ಅಮ್ಮನವರಿಗೆ ಜಯವಾಗಲಿ' ಎಂದು ದನಿ ಕೇಳಿಸಿತು.

ಬಾಬುಗಳು—"ಯಾರದು?" ಎಂದು ಕೇಳಿದರು.

ರಾಯ್‌ಚರಣ ಬಂದು ನಮಸ್ಕರಿಸಿ, "ನಾನು ರಾಯ್‌ಚರಣ" ಎಂದನು.

ಮುದುಕನನ್ನು ಕಂಡು ಅನುಕೂಲನ ಹೃದಯ ಕರಗಿತು. ಅವನ ಈಗಿನ ಸ್ಥಿತಿಗತಿಯ ವಿಷಯವಾಗಿ ಸಹಜ ಪ್ರಶ್ನೆಮಾಡಿ ಪುನಃ ಅವನನ್ನು ಕೆಲಸಕ್ಕೆ ಸೇರಿಸಿಕೊಳ್ಳುವ ಮಾತು ಎತ್ತಿದರು.

ರಾಯ್‌ಚರಣ ನಸುನಕ್ಕು 'ತಾಯಿಯವರಿಗೆ ಒಮ್ಮೆ ನಮಸ್ಕರಿಸ ಬೇಕು' ಎಂದನು.

ಅನುಕೂಲ್ ಬಾಬು ಅವನನ್ನು ಸಂಗಡ ಕರೆದುಕೊಂಡು ಅಂತಃಪುರಕ್ಕೆ ಹೋದರು. ಯಜಮಾನಿ ರಾಯ್‌ಚರಣನನ್ನು ಅಷ್ಟಾಗಿ ಆದರಿಸಲಿಲ್ಲ; ರಾಯ್‌ಚರಣ ಅದನ್ನು ಲಕ್ಷಿಸದೆ ಕೈಜೋಡಿಸಿಕೊಂಡು "ಪ್ರಭೂ, ತಾಯೀ, ನಾನೇ ನಿಮ್ಮ ಮಗನನ್ನು ಕದ್ದುಕೊಂಡು ಹೋಗಿದ್ದೆ. ಪದ್ಮೆಯೂ ಅಲ್ಲ. ಯಾರೂ ಅಲ್ಲ, ನಾನೇ ಆ ಕೃತಘ್ನ" ಎಂದನು.

ಅನುಕೂಲ್ ಬಾಬು—"ಏನಂದೆ! ಅವನೆಲ್ಲಿ" ಎಂದರು.

'ಸ್ವಾಮಿ, ನನ್ನ ಬಳಿಯಲ್ಲೇ ಇದ್ದಾನೆ. ನಾನು ನಾಳೆದ್ದು ಕರೆತರುವೆ' ಎಂದನು.

ಅಂದು ಭಾನುವಾರ ಕಛೇರಿ ಇರಲಿಲ್ಲ ಬೆಳಗಿನಿಂದ ಗಂಡಹೆಂಡಿರಿಬ್ಬರೂ ಅತ್ಯಾಸಕ್ತಿಯಿಂದ ಹಾದಿ ಕಾಯುತ್ತ ಕುಳಿತಿದ್ದರು. ಹತ್ತು ಗಂಟೆಯ ವೇಳೆಗೆ ಫೇಲ್‌ನಾಪನ್ನು ಸಂಗಡ ಕರೆದುಕೊಂಡು ರಾಯ್‌ಚರಣ ಬಂದು ತಲುಪಿದನು.

ಅನುಕೂಲನ ಹೆಂಡತಿ ಯಾವ ಪ್ರಶ್ನೆಯನ್ನೂ ಕೇಳದೆ ಯಾವ ವಿಧವಾದ ಯೋಚನೆಯನ್ನೂ ಮಾಡದೆ ಅವನನ್ನು ತೊಡೆಯಮೇಲೆ ಕೂರಿಸಿಕೊಂಡಳು. ಅವನನ್ನು ಮುಟ್ಟಿ ನೋಡಿ ತಲೆಯನ್ನು ಆಘ್ರಾಣಿಸುತ್ತ, ತೃಪ್ತಿಯಾಗದ ಕಣ್ಣುಗಳಿಂದ ಅವನನ್ನು ಮುಖ ದಿಟ್ಟಿಸಿ ನೋಡುತ್ತ ಅಳುತ್ತ ನಗುತ್ತ ವ್ಯಾಕುಲಗೊಳ್ಳುತಿದ್ದಳು ವಾಸ್ತವದಲ್ಲಿ ಹುಡುಗ ನೋಡಲು ಲಕ್ಷಣವಾಗಿದ್ದ. ಉಡಿಗೆತೊಡಿಗೆ ನಡೆ ನುಡಿ ಯಾವುದರಲ್ಲೂ ದಾರಿದ್ರ್ಯದ ಲಕ್ಷಣ ಎಳ್ಳಷ್ಟೂ ಇರಲಿಲ್ಲ. ಮುಖ ನೋಡಲು ಅಂದವಾಗಿತ್ತು. ವಿನಯ ಮತ್ತು ನಾಚಿಕೆ ಯಿಂದ ಕೂಡಿದ ಅವನ ನಡತೆ ಕಂಡು ಅನುಕೂಲ ಬಾಬುಗಳ ಹೃದಯ ದಲ್ಲೂ ಥಟ್ಟನೆ ಪ್ರೀತಿ ಉಕ್ಕಿ ಹೊರಹೊಮ್ಮಿತು.

ಆದರೂ ಆತ ಅವಿಚಲಿತ ಭಾವದಿಂದ 'ಏನಾದರೂ ಪ್ರಮಾಣ ವಿದೆಯೋ' ಎಂದು ಕೇಳಿದರು.

ರಾಯ್‌ಚರಣ "ಇಂತಹ ಕೆಲಸದಲ್ಲಿ ಪ್ರಮಾಣ ಹೇಗೆತಾನೆ ಇರಲು ಸಾಧ್ಯ. ನಾನು ನಿಮ್ಮ ಮಗುವನ್ನು ಕದ್ದಿದ್ದೆನೆಂಬುದನ್ನು ಭಗವಂತನೊಬ್ಬನೇ ಬಲ್ಲ. ಪ್ರಪಂಚದಲ್ಲಿ ಬೇರೆ ಯಾರೂ ಅರಿಯರು" ಎಂದನು.

ಅನುಕೂಲ ಬಾಬುಗಳು ಯೋಚನೆಮಾಡಿ—"ಹುಡುಗ ಸಿಕ್ಕಿದ ಮಾತ್ರಕ್ಕೆ ತಮ್ಮ ಹೆಂಡತಿ ಅದೆಷ್ಟು ಆಸಕ್ತಿಯಿಂದ ಅವನನ್ನು ಆದರಿಸಲಾರಂಭಿಸಿದಳು ಈಗ ಪ್ರಮಾಣ ಸಂಗ್ರಹಿಸುವ ಪ್ರಯತ್ನಮಾಡುವುದು ಸರಿಯಲ್ಲ. ಹೇಗಿದ್ದರೂ ನಂಬಲೇಬೇಕು. ಅದಲ್ಲದೆ ರಾಯ್‌ಚರಣ ಇಂತಹ ಹುಡುಗನನ್ನು ಎಲ್ಲಿಂದ ತಂದಾನು. ಮುದಿ ಭೃತ್ಯ ನಿಷ್ಕಾರಣವಾಗಿ ತನ್ನನ್ನು ಮೋಸಮಾಡುವುದಾದರೂ ಏಕೆ" ಎಂದು ಯೋಚಿಸಿದರು.

ಹುಡುಗನ ಸಂಗಡಲೂ ಮಾತು ಕತೆ ನಡೆಸಿ ಅವನು ಚಿಕ್ಕಂದಿನಿಂದಲೂ ರಾಯ್‌ಚರಣನ ಸಂಗಡ ಇದ್ದನೆಂದೂ, ರಾಯ್‌ಚರಣನನ್ನು ಅವನು ತಂದೆಯೆಂದು ಎಣಿಸಿದ್ದನೆಂದೂ, ಆದರೆ ರಾಯ್‌ಚರಣ ಮಾತ್ರ ಅವನಲ್ಲಿ ತಂದೆಯಂತೆ ನಡೆದುಕೊಳ್ಳದೆ ಆಳಿನಂತೆ ನಡೆದುಕೊಂಡು ಬಂದಿರುವನೆಂದೂ ತಿಳಿದರು.

ಅನುಕೂಲ ಬಾಬು ಮನಸ್ಸಿನ ಸಂದೇಹವನ್ನು ದೂರಮಾಡಿ—"ಆದರೆ ರಾಯ್‌ಚರಣ, ನೀನು ಇನ್ನು ನಮ್ಮ ನೆರಳು ತುಳಿಯುವುದು ಸಾಧ್ಯವಿಲ್ಲ" ಎಂದರು.

ರಾಯ್‌ಚರಣ ಕೈಮುಗಿದು ಗದ್ಗದ ಸ್ವರದಲ್ಲಿ "ಪ್ರಭು, ಮುದಿ ವಯಸ್ಸಿನಲ್ಲಿ ಎಲ್ಲಿ ಹೋಗಲಿ" ಎಂದನು.

ಯಜಮಾನಿ—"ಓ ಇರಲಿ ಬಿಡಿ. ನನ್ನ ಮಗುವಿಗೆ ಒಳ್ಳೆಯದಾಗಲಿ; ಅವನನ್ನು ನಾನು ಕ್ಷಮಿಸಿರುವೆ" ಎಂದರು.

ನ್ಯಾಯಪರಾಯಣ ಅನುಕೂಲ ಬಾಬುಗಳು "ಇವನು ಮಾಡಿದ ತಪ್ಪು ಕ್ಷಮಿಸಲಾರದಂತಹದು" ಎಂದರು.

ರಾಯ್‌ಚರಣ ಅನುಕೂಲ್ ಬಾಬುಗಳ ಕಾಲು ಹಿಡಿದುಕೊಂಡು "ನಾನು ಮಾಡಲಿಲ್ಲ. ಈಶ್ವರ ಮಾಡಿದ" ಎಂದನು.

ತನ್ನ ಪಾಪವನ್ನು ಈಶ್ವರನ ಹೆಗಲಮೇಲೆ ಹೇರುವ ಪ್ರಯತ್ನ ನೋಡಿ ಅನುಕೂಲ ಬಾಬು ಮತ್ತಷ್ಟು ಬೇಸರಗೊಂಡು, "ಇಂತಹ ವಿಶ್ವಾಸಘಾತುಕತೆ ಮಾಡಿದವನನ್ನು ಮತ್ತೆ ನಂಬುವುದು ಸರಿಯಲ್ಲ" ಎಂದರು.

ರಾಯ್‌ಚರಣ ಒಡೆಯನ ಕಾಲು ಹಿಡಿದುಕೊಂಡು, "ಅದು ನಾನಲ್ಲ–ಒಡೆಯ" ಎಂದನು.

"ಹಾಗಾದರೆ ಯಾರು ?"

"ನನ್ನ ಅದೃಷ್ಟ."

ಆದರೆ ಈತರಹದ ಹೇಳಿಕೆ ಯಾವ ವಿದ್ಯಾವಂತನಿಗೂ ಸಂಗತವಾಗಿ ತೋರದು.

ರಾಯ್‌ಚರಣ "ಪ್ರಪಂಚದಲ್ಲಿ ನನಗೆ ಬೇರೆ ಯಾರೂ ಇಲ್ಲ" ಎಂದನು. ಫೇಲ್‌ನಾ ತಾನು ಮುನ್ಸಿಫರ ಮಗ ಎಂಬುದನ್ನು ಕಂಡಾಗ, ರಾಯ್‌ಚರಣ ತನ್ನನ್ನು ಕದ್ದು ತನ್ನ ಮಗನೆಂದು ಅಪಮಾನಗೊಳಿಸಿರುವನೆಂದು ತಿಳಿದಾಗ, ಅವನ ಮನಸ್ಸಿನಲ್ಲಿ ಸ್ವಲ್ಪ ಕೋಪ ಮೂಡಿತು. ಆದರೆ ಆಗಲೂ ಸ್ವಲ್ಪ ಉದಾರಭಾವದಿಂದ ತಂದೆಯೊಡನೆ—"ಅಪ್ಪಾ, ಅವನನ್ನು ಕ್ಷಮಿಸು, ಮನೆಯಲ್ಲಿ ಇರಗೊಡಬೇಡ. ಅವನಿಗೆ ತಿಂಗಳಿಗೆ ಸ್ವಲ್ಪ ಹಣ ಕೊಡು" ಎಂದನು.

ಇಷ್ಟರ ಅನಂತರ ರಾಯ್‌ಚರಣ ಯಾವ ಮಾತನ್ನೂ ಆಡದೆ ಒಮ್ಮೆ ಮಗನ ಮುಖ ನೋಡಿ ಎಲ್ಲರಿಗೂ ನಮಸ್ಕರಿಸಿದನು. ಅನಂತರ ಬಾಗಿಲಿನಿಂದ ಹೊರಗೆ ಹೋಗಿ ಪ್ರಪಂಚದ ಲೆಕ್ಕವಿಲ್ಲದ ಜನರಲ್ಲಿ ಕಲೆತುಹೋದನು. ತಿಂಗಳ ಕಡೆಯಲ್ಲಿ ಅನುಕೂಲ ಬಾಬು ಅವನ ಊರಿನ ವಿಳಾಸಕ್ಕೆ ಸ್ವಲ್ಪ ಮಾಸಾಶನ ಕಳುಹಿಸಲು ಆ ಹಣ ಹಿಂದಿರುಗಿ ಬಂದಿತು. ಅಲ್ಲಿ ಆ ಹೆಸರಿನವರು ಯಾರೂ ಇರಲಿಲ್ಲ.

(ಕ್ರಿ.ಶ. ೧೮೯೨)

# ತಾರಾಪ್ರಸನ್ನನ ಕೀರ್ತಿ

ಲೇಖಕ ಜಾತಿಯುವರ ಸ್ವಭಾವದಂತೆಯೇ ತಾರಾಪ್ರಸನ್ನ ಸ್ವಲ್ಪ ಸಂಕೋಚ ಪ್ರಕೃತಿಯುವ. ಜನರ ಮುಂದೆ ಬರುವುದೆಂದರೆ ಅವನ ಜೀವ ಕುತ್ತಿಗೆಗೆ ಬರುತಿತ್ತು. ಮನೆಯಲ್ಲೇ ಕುಳಿತು ಲೇಖನಿ ಓಡಿಸಿ ಅವನ ದೃಷ್ಟಿಶಕ್ತಿ ಕ್ಷೀಣವೂ, ಬೆನ್ನು ಸ್ವಲ್ಪ ಗೂನೂ ಆಗಿತ್ತು. ಅವನ ಲೋಕವ್ಯವಹಾರ ಜ್ಞಾನ ಅತ್ಯಲ್ಪ. ಲೌಕಿಕತೆಯ ಪದ್ಧತಿಯ ಮಾತುಕತೆ ಅವನ ಬಾಯಿಂದ ಸುಲಭದಲ್ಲಿ ಹೊರಬೀಳದು. ಈ ಕಾರಣದಿಂದ ಮನೆಯ ಆವರಣದಿಂದ ಹೊರಬಿದ್ದರೆ ಆಪತ್ತು ಒದಗದೆ ಇರದೆಂದು ಆತ ತೀರ್ಮಾನಿಸಿದ್ದ.

ಜನರೂ ಅವನನ್ನು ಒಂದು ಬಗೆಯ ವಿಚಿತ್ರ ಸ್ವಭಾವದವನೆಂದು ಎಣಿಸಿದ್ದರು. ಇದು ಅವರ ತಪ್ಪಲ್ಲ ಸ್ವಲ್ಪ ಯೋಚಿಸಿ ನೋಡಿ ಮತ್ತೆ, ಮೊದಲ ಸಾರಿ ಪರಿಚಯವಾದಾಗ ಗೃಹಸ್ಥರೊಬ್ಬರು ಅತಿ ಉತ್ಸಾಹದ ಧ್ವನಿಯಲ್ಲಿ—"ತಮ್ಮಂತಹ ಮಹನೀಯರ ಪರಿಚಯದಿಂದ ನನಗೆ ಎಷ್ಟು ಆನಂದವಾಯಿತು ಎಂಬುದನ್ನು ಹೇಳಲು ಈ ಒಂದು ಬಾಯಿ ಸಾಲದಾಗಿದೆ" ಎಂದು ಹೇಳಿದರೆ, ತಾರಾಪ್ರಸನ್ನ ಪಟ್‌ಪಿಟ್ ಎನ್ನದೆ ತನ್ನ ಬಲ ಅಂಗೈಯನ್ನು ಅತ್ಯಾಸಕ್ತಿಯಿಂದ ದಿಟ್ಟಿಸಿ ನೋಡತೊಡಗಿದನು. ಅಕಸ್ಮಾತ್ತಾದ ಈ ನೀರವತೆಯ ಅರ್ಥವೇನೆಂದರೆ, "ಸರಿಯೇ, ನಿಮಗೆ ಆನಂದ ಆಗಿದ್ದರೂ ಇರಬಹುದು. ಆದರೆ ನನಗೆ ಆನಂದ ಆಗಿದೆಯೆಂಬ ಸುಳ್ಳು ಸಂಗತಿಯನ್ನ ಈ ಬಾಯಿಂದ ಹೇಳೋದು ತಾನೇ ಹೇಗೆ?"

ಹಗಲ ಊಟಕ್ಕೆ ಕರೆದು ಲಕ್ಷಾಧೀಶ ಮನೆಯ ಯಜಮಾನ ಸಂಜೆಯ ಹೊತ್ತಿಗೆ ಉಣಬಡಿಸಲು ಆರಂಭಿಸಿ—ನಡುನಡುವೆ ನಮ್ರಪೂರ್ವಕ ಉಪಚಾರದೊಡನೆ ತಿನಿಸುಗಳ ಅಲ್ಪತೆಯ ವಿಷಯವಾಗಿ ತಾರಾಪ್ರಸನ್ನನೊಡನೆ—"ಇದು ಎಂತಹ ಊಟ, ಬಹು ಸಾಮಾನ್ಯ, ದರಿದ್ರನ ಭಕ್ತಿಯ ಸೇವೆ, ವಿದುರನ ಪ್ರಯತ್ನದಹಾಗೆ—ತಮ್ಮಂತಹ ಮಹನೀಯರಿಗೆ ಕೊಟ್ಟ ತೊಂದರೆ ಕ್ಷಮಿಸಬೇಕು" ಎಂದು ಹೇಳಿದ್ದಾದರೆ ತಾರಾಪ್ರಸನ್ನ ಸದ್ದಿಲ್ಲದೆ ಇರುತಿದ್ದ.

ಅಂದರೆ ಆ ಗೃಹಸ್ಥ ಹೇಳಿದ್ದೆಲ್ಲಾ ಸತ್ಯ. ಅದಕ್ಕೆ ಪ್ರತಿಹೇಳಬೇಕಾದ ಆವಶ್ಯಕತೆಯೇ ಇಲ್ಲ ಎಂದಹಾಗೆ.

ಒಮ್ಮೊಮ್ಮೆ ಯಾರಾದರೊಬ್ಬ ಗೃಹಸ್ಥ ತಾರಾಪ್ರಸನ್ನನೆಡೆಗೆ ಬಂದು ಅವನಂತಹ ಅಗಾಧ ಪಾಂಡಿತ್ಯವುಳ್ಳವರು ಈ ಕಾಲದಲ್ಲಿ ದುರ್ಲಭವೆಂದೂ, ಸರಸ್ವತಿ ತನ್ನ ಕಮಲದ ಹೂವಿನ ಪೀಠವನ್ನು ಬಿಟ್ಟು ತಾರಾಪ್ರಸನ್ನನ ಕಂಠದಲ್ಲಿ ನೆಲಸಿರುವಳೆಂಬೂ ಹೇಳುತಿದ್ದ. ಮುಖದ ಇದಿರಿನಲ್ಲಿ ಹೊಗಳುವವರೂ ಪರರ ಬಳಿ ತಮ್ಮನ್ನು ನಿಂದಿಸಿಕೊಳ್ಳುವವರೂ ಇದಿರಿನವರು ಪ್ರತಿ ಹೇಳುವರೆಂಬ ನಂಬಿಕೆಯಿಂದಲೇ ಸ್ವಲ್ಪ ಅತ್ಯುಕ್ತಿಗೆ ತೊಡಗುವರೆಂಬ ವಿಷಯವನ್ನು ತಿಳಿದಿರಬೇಕಾದುದೂ ಇದಿರಿನಲ್ಲಿರುವವರು ಹೇಳಿದ್ದನ್ನೆಲ್ಲಾ ಸದ್ದಿಲ್ಲದೆ ಅಂಗೀಕರಿಸಿದರೆ ಮಾತನಾಡಿದವ ತಾನು ಮೋಸಹೋದುದಾಗಿ ತೀರ್ಮಾನಿಸಿ ವ್ಯಥೆಗೊಳ್ಳುವನೆಂದೂ ತಿಳಿದಿರಬೇಕಾದುದು ತಾರಾಪ್ರಸನ್ನನ ಕರ್ತವ್ಯ. ಇಂತಹ ಸಂದರ್ಭಗಳಲ್ಲಿ ಮಾತನಾಡುವ ವ್ಯಕ್ತಿ ಹೇಳುವುದೆಲ್ಲ ಸಂಪೂರ್ಣವಾಗಿ ಸುಳ್ಳೆಂಥು ಹೇಳಿದರೆ ಆತನಿಗೆ ಏನೇನೂ ದುಃಖವಾಗದು.

ಮನೆಯ ಜನರೊಡನೆ ತಾರಾಪ್ರಸನ್ನನ ನಡೆ ಬೇರೆ ಬಗೆಯದು. ಹೆಚ್ಚೇಕೆ ಅವನ ಹೆಂಡತಿ ದಾಕ್ಷಾಯಣಿಗೂ ಮಾತಿನಲ್ಲಿ ಅವನನ್ನು ಸೋಲಿಸುವುದು ಅಸಂಭವವಾದ ಸಂಗತಿ. ಆಕೆ ಮಾತು ಮಾತಿಗೆ ಸರಿ, ಸರಿ, ನಾನೇ ಸೋತೆ ನನಗೆ ಬೇರೆ ಕೆಲಸವಿದೆ ಎನ್ನುವಳು. ವಾಗ್ಯುದ್ಧದಲ್ಲಿ ತಮ್ಮ ಬಾಯಿಂದಲೇ ಸೋಲನ್ನು ಒಪ್ಪಿಕೊಳ್ಳುವಂತೆ ಮಾಡಬಲ್ಲ ಶಕ್ತಿ ಮತ್ತು ಅದೃಷ್ಟವುಳ್ಳ ಗಂಡಂದಿರು ಅದೆಷ್ಟು ಜನ ಇರುವರು.

ತಾರಾಪ್ರಸನ್ನನ ಕಾಲ ನೆಮ್ಮದಿಯಿಂದ ಕಳೆಯುತ್ತಿತ್ತು. ವಿದ್ಯೆ ಬುದ್ಧಿ ಮತ್ತು ಸಾಮರ್ಥ್ಯದಲ್ಲಿ ತನ್ನ ಗಂಡನಿಗೆ ಸರಿಸಮಾನರು ಯಾರೂ ಇಲ್ಲವೆಂದು ದಾಕ್ಷಾಯಣಿಯ ದೃಢವಿಶ್ವಾಸ. ಅವಳು ಈ ಮಾತನ್ನು ಗಟ್ಟಿಯಾಗಿ ಹೇಳಲು ಹಿಂಜರಿಯುತ್ತಿರಲಿಲ್ಲ. ಇವಳ ಮಾತು ಕೇಳಿ 'ನಿನಗೆ ಗಂಡನನ್ನು ಬಿಟ್ಟು ಬೇರೆ ಯಾರೂ ಇಲ್ಲ. ಇನ್ನ ಯಾರ ಸಂಗಡ ತಾನೇ ಹೋಲಿಸೀಯೆ' ಎನ್ನುವನು. ಇದನ್ನು ಕೇಳಿ ದಾಕ್ಷಾಯಣಿ ಬಹಳ ಕೋಪಿಸಿಕೊಳ್ಳುವಳು.

ತನ್ನ ಗಂಡನ ಸಾಮರ್ಥ್ಯ ಹೊರಗೆ ಪ್ರಕಟವಾಗಲಿಲ್ಲ. ಗಂಡ ಈ ವಿಷಯವಾಗಿ ಯಾವ ಪ್ರಯತ್ನವನ್ನೂ ಮಾಡುತ್ತಿಲ್ಲ—ತಾನು ಬರೆದುದನ್ನು

ಅಚ್ಚು ಹಾಕಿಸುತ್ತಿಲ್ಲ ಎಂದು ಆಕೆಗೊಂದು ದೊಡ್ಡ ಕೊರತೆಯಿತ್ತು. ದಾಕ್ಷಾಯಣಿ ಬಲಾತ್ಕರಿಸಿ ಆಗಾಗ್ಯೆ ಗಂಡನ ಬರಹಗಳನ್ನು ಓದಿಸಿ ಕೇಳುತ್ತಿದ್ದಳು. ಅರ್ಥವಾಗದಿದ್ದಷ್ಟೂ ಆಶ್ಚರ್ಯಪಡುವಳು. ಆಕೆ ಕೃತ್ತಿವಾಸನ ರಾಮಾಯಣ, ಕಾಶೀರಾಮದಾಸನ ಮಹಾಭಾರತ ಕವಿ ಕಂಕಣನ ಚಂಡೀಮಂಗಲ ಕೇಳಿರುವಳು. ಕಥಕತೆ*ಯನ್ನೂ ಕೇಳಿರುವಳು. ಅವೆಲ್ಲ ನೀರು ಕುಡಿದಹಾಗೆ ಅರ್ಥಮಾಡಿಕೊಳ್ಳಬಹುದು ಅವನ್ನ ನಿರಕ್ಷರಕುಕ್ಷಿಗಳೂ ಅನಾಯಾಸವಾಗಿ ತಿಳಿದುಕೊಳ್ಳಬಹುದು. ಆದರೆ ಅವಳ ಗಂಡನಂತೆ ಹೀಗೆ ಪೂರ್ತಿಯಾಗಿ ಅರ್ಥವಾಗದ ಆಶ್ಚರ್ಯಕರ ಸಾಮರ್ಥ್ಯ ಆಕೆ ಇದಕ್ಕೆ ಮುಂಚೆ ಕಂಡಿರಲಿಲ್ಲ

'ಈ ಪುಸ್ತಕ ಅಚ್ಚು ಹಾಕಿಸಬೇಕು, ಮತ್ತೆ ಒಬ್ಬರಲ್ಲ ಒಬ್ಬರು ಒಂದಕ್ಷರವನ್ನೂ ತಿಳಿದುಕೊಳ್ಳಲಾರರು, ಆಗ ದೇಶವಾದ್ಯಂತದ ಜನ ಯಾವ ವಿಧದಲ್ಲಿ ವಿಸ್ಮಯದಲ್ಲಿ ಮುಳುಗಿಹೋಗುವರು' ಎಂದು ಆಕೆ ಮನಸ್ಸಿನಲ್ಲೇ ಆಲೋಚಿಸುವಳು 'ಈ ಬರಹಗಳನ್ನೆಲ್ಲ ಅಚ್ಚುಹಾಕಿಸಿ' ಎಂದು ಸಾವಿರ ಬಾರಿ ಗಂಡನಿಗೆ ಹೇಳುತ್ತಿದ್ದಳು.

ಪುಸ್ತಕ ಅಚ್ಚು ಹಾಕಿಸುವ ವಿಷಯದಲ್ಲಿ ಭಗವಾನ್ ಮನು "ಸ್ವತಃ ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾಃ' ಎಂದು ಹೇಳಿರುವನು" ಎಂದು ಗಂಡ ಹೇಳಿದನು.

ತಾರಾಪ್ರಸನ್ನನಿಗೆ ನಾಲ್ಕು ಮಕ್ಕಳು. ನಾಲ್ಕೂ ಹೆಣ್ಣು. ಅದು ಹೆತ್ತವಳ ಸಾಮರ್ಥ್ಯ ಹೀನತೆ ಎಂದು ದಾಕ್ಷಾಯಣಿ ಎಣಿಸುವಳು. ಇದರಿಂದ ಪ್ರತಿಭಾಶಾಲಿಯಾದ ಗಂಡನಿಗೆ ತಾನು ಯೋಗ್ಯಳಲ್ಲದ ಹೆಂಡತಿ ಎಂದು ಎಣಿಸುವಳು. ಮಾತು ಮಾತಿನಲ್ಲೇ ಇಂತಹ ಅರ್ಥಮಾಡಿಕೊಳ್ಳಲಾರದ ಗ್ರಂಥಗಳನ್ನು ರಚಿಸಬಲ್ಲ ಗಂಡ ಇದಾನಲ್ಲಾ, ಅವನ ಹೆಂಡತಿಯ ಹೊಟ್ಟೆಯಲ್ಲಿ ಬರಿಯ ಹೆಣ್ಣಲ್ಲದೆ ಬೇರೆ ಮಕ್ಕಳೇ ಹುಟ್ಟದಿರುವದು ಹೆಂಡತಿಯ ಅಪಟುತ್ವದ ಒಂದು ಪರಿಚಯವೆಂದು ಅವಳ ಅಭಿಪ್ರಾಯ.

ಮೊದಲನೆಯ ಮಗಳು ಅಪ್ಪನ ಸೊಂಟದ ಎತ್ತರಕ್ಕೆ ಬೆಳೆದಳು, ಆಗ ತಾರಾಪ್ರಸನ್ನನ ನಿಶ್ಚಿಂತ ಭಾವ ಅಳಿಸಿಹೋಯಿತು. ಒಬ್ಬರ ಹಿಂದೆ ಒಬ್ಬರಂತೆ

---

* ಕಥ್‌ಕತಾ—ಕನ್ನಡದ ಯಕ್ಷಗಾನದಂತಹ ಆಟ.

ನಾಲ್ಕು ಹೆಣ್ಣುಗಳ ಮದುವೆ ಮಾಡಬೇಕು. ಅದಕ್ಕಾಗಿ ಅಪಾರವಾಗಿ ಹಣ ಸಂಗ್ರಹಿಸಬೇಕು ಎಂದು ಆತನಿಗೆ ಅರಿವಾಯಿತು. ಗೃಹಿಣಿ 'ನಿಶ್ಚಿಂತ ರೀತಿಯಲ್ಲಿ ನೀವು ಒಮ್ಮೆ ಮನಸಿಟ್ಟು ಪ್ರಯತ್ನಮಾಡಿ ನೋಡಿ ಆಷ್ಟಾದರೆ ಏನೂ ಯೋಚಿಸಬೇಕಾದ್ದೇ ಇಲ್ಲ' ಎಂದಳು.

ತಾರಾಪ್ರಸನ್ನ ಸ್ವಲ್ಪ ವ್ಯಗ್ರಭಾವದಿಂದ—"ನಿಜವಾಗಿಯೇನು? ಒಳ್ಳೇದು, ಏನು ಮಾಡಬೇಕು ಹೇಳು ನೋಡೋಣ" ಎಂದನು.

ದಾಕ್ಷಾಯಣಿ ಸಂಶಯವೇ ಇಲ್ಲದ ಉದ್ವೇಗರಹಿತ ಭಾವದೊಡನೆ "ಕಲ್ಕತ್ತೆಗೆ ಹೋಗಿ—ನಿಮ್ಮ ಪುಸ್ತಕಗಳನ್ನು ಅಚ್ಚುಹಾಕಿಸಿ,--ನಾಲ್ಕು ಜನ ನಿಮ್ಮನ್ನು ಅರಿಯಲಿ. ಆಮೇಲೆ ನೋಡಿ--ಹಣ ತನ್ನಷ್ಟಕ್ಕೆ ತಾನೇ ಬರುತ್ತಿಯೋ ಇಲ್ಲವೋ" ಎಂದಳು.

ಹೆಂಡತಿಯ ನಂಬಿಕೆಯಿಂದ ತಾರಾಪ್ರಸನ್ನನಿಗೂ ಕ್ರಮೇಣ ನಂಬಿಕೆಯುಂಟಾಗತೊಡಗಿತು. ಕೊನೆಗೆ ತಾನು ಇದುವರೆಗೆ ಎಡೆಬಿಡದೆ ಕುಳಿತು ಎಷ್ಟೊಂದು ಬರೆದಿರುವನೋ ಅದಷ್ಟರಿಂದಲೇ ಕೇರಿಯಲ್ಲಿರುವ ಹೆಣ್ಣು ಹೆತ್ತವರೆಲ್ಲರ ಕನ್ಯಾಸೆರೆ ಬಿಡಿಸಲು ಸಾಧ್ಯವೆಂದು ಅವನಿಗೆ ಅನಿಸತೊಡಗಿತು.

ಈಗ ಕಲ್ಕತ್ತೆಗೆ ಹೊರಡುವ ವೇಳೆಯಲ್ಲಿ ಬಹು ಗೊಂದಲ ಆರಂಭಿಸಿತು. ಕೆಲಸಮಾಡಿ ಅನುಭವವಿಲ್ಲದೆ ಅಸಹಾಯಕನಾಗಿರುತ್ತ ಬಂದಿರುವ ತನ್ನ ಗಂಡನನ್ನು ಒಂಟಿಯಾಗಿ ಕಲ್ಕತ್ತೆಗೆ ಕಳುಹಿಸಲು ದಾಕ್ಷಾಯಣಿ ಒಪ್ಪಲಿಲ್ಲ. ಅವನಿಗೆ ಉಣಿಸಿ, ಉಡಿಸಿ, ನಿತ್ಯದ ಕರ್ತವ್ಯಗಳನ್ನು ನೆನಪು ಮಾಡಿಕೊಟ್ಟು ಪ್ರಪಂಚದ ವಿವಿಧ ಉಪದ್ರವಗಳಿಂದ ಅವನನ್ನು ರಕ್ಷಿಸುವವರು ಯಾರು.

ಆದರೆ ಅನುಭವಹೀನನಾದ ಗಂಡನೂ ಪರಸ್ಥಳದಲ್ಲಿ ಹೆಂಡತಿ ಮತ್ತು ಮಗಳನ್ನು ಸಂಗಡ ಕರೆದುಕೊಂಡುಹೋಗಲು ಬಹಳ ಹೆದರಿದವನೂ ಒಪ್ಪದವನೂ ಆಗಿದ್ದ. ಕೊನೆಗೆ ದಾಕ್ಷಾಯಣಿ ಬುದ್ಧಿವಂತನಾದ ಒಬ್ಬನಿಗೆ ಗುಟ್ಟಾಗಿ ಗಂಡನ ನಿತ್ಯದ ಅಭ್ಯಾಸ ವಿಷಯವಾಗಿ ಸಾವಿರಾರು ಸಂಗತಿಗಳನ್ನು ತಿಳಿಸಿ ತನ್ನ ಸ್ಥಾನದಲ್ಲಿ ನಿಯಮಿಸಿದಳು. ಗಂಡನ ಬಳಿ ನಾನಾ ಆಣೆ, ಭಾಷೆಗಳನ್ನಿಟ್ಟುಕೊಂಡು ನಾನಾ ಯಂತ್ರ ಮಂತ್ರಗಳಿಂದ ಅವನನ್ನು ರಕ್ಷಣೆಮಾಡಿಸಿ ಕಳುಹಿಸಿಕೊಟ್ಟು ಮನೆಯೊಳಕ್ಕೆ ಹೋಗಿ ಬೋರಲಾಗಿ ಬಿದ್ದು ಅಳತೊಡಗಿದಳು.

ಕಲ್ಕತ್ತೆಯನ್ನು ತಲುಪಿ ಗಂಡ ಬುದ್ಧಿವಂತನಾದ. ತನ್ನ ಜೊತೆಗಾರನ ಸಹಾಯದಿಂದ 'ವೇದಾಂತ ಪ್ರಭಾಕರ'ವನ್ನು ಪ್ರಕಟಿಸಿದನು. ದಾಕ್ಷಾಯಣಿಯ ಒಡವೆ ಒತ್ತೆಯಿಟ್ಟು ತಂದಿದ್ದ ಹಣದಲ್ಲಿ ಹೆಚ್ಚು ಭಾಗ ಖರ್ಚಾಯಿತು.

ಮಾರಾಟಕ್ಕಾಗಿ ಪುಸ್ತಕದ ಅಂಗಡಿಗಳಿಗೆ ಮತ್ತು ವಿಮರ್ಶೆಗೆ ಮಾತ್ರ ದೇಶದ ಸಣ್ಣ ದೊಡ್ಡ ಪತ್ರಿಕಾ ಸಂಪಾದಕರ ಬಳಿಗೆ 'ವೇದಾಂತ ಪ್ರಭಾಕರ' ಕಳುಹಿಸಿಕೊಟ್ಟನು. ಹೆಂಡತಿಗೂ ಅಂಚೆಯಲ್ಲಿ ಒಂದು ಪ್ರತಿ ರಿಜಿಸ್ಟರ್ ಮಾಡಿ ಕಳುಹಿಸಿದನು. ಅಂಚೆಯವರು ಮಾರ್ಗದಲ್ಲಿ ಕದ್ದುಬಿಡುವರೆಂಬ ಸಂಶಯ ವಿತ್ತು.

ಅಚ್ಚಿನ ಪುಸ್ತಕದ ಹೊದಿಕೆಯ ಮೇಲೆ ಅಚ್ಚಿನ ಅಕ್ಷರಗಳಲ್ಲಿ ತನ್ನ ಗಂಡನ ಹೆಸರನ್ನು ನೋಡಿದ ದಿನ ದಾಕ್ಷಾಯಣಿ ನೆರೆಹೊರೆಯ ಹೆಂಗಸರನ್ನು ಅರಿಸಿನ ಕುಂಕುಮಕ್ಕೆ ಕರೆದಳು. ಎಲ್ಲರೂ ಬಂದು ಕೂರುವ ಸ್ಥಳದಲ್ಲೇ ಪುಸ್ತಕವನ್ನು ಇಟ್ಟಳು.

ಎಲ್ಲರೂ ಬಂದು ಕುಳಿತನಂತರ--ದೊಡ್ಡ ಗಂಟಲಿನಲ್ಲಿ--"ಅಮ್ಮಾ--ಪುಸ್ತಕವನ್ನು ಅಲ್ಲಿ ಎಸೆದಿರುವವರು ಯಾರು? ಅನ್ನದಾ! ಪುಸ್ತಕ ಕೊಡಮ್ಮ. ಎತ್ತಿ ನೋಡೋಣ" ಎಂದಳು. ಮಕ್ಕಳಲ್ಲಿ ಅನ್ನದೆ ಓದು ಬರಹ ಬಲ್ಲವಳು. ಪುಸ್ತಕವನ್ನೆತ್ತಿ ಗೂಡಿನಲ್ಲಿಟ್ಟಳು.

ಒಂದು ಘಳಿಗೆಯ ಅನಂತರ ಯಾವದೋ ಸಾಮಾನು ತೆಗೆಯಲು ಹೋಗಿ ಪುಸ್ತಕವನ್ನು ಕೆಳಗೆ ಬೀಳಿಸಿದಳು. ಅನಂತರ ತನ್ನ ಹಿರಿಯ ಮಗಳನ್ನು ಸಂಬೋಧಿಸಿ--"ಶಶೀ ಅಪ್ಪನ ಪುಸ್ತಕ ಓದಲು ಆಶೆಯಾಗಿರುವಂತೆ ಕಾಣುತ್ತೆ. ತೆಗೆದುಕೋ ಮಗು, ಓದು. ನಾಚುವುದೇಕೆ?" ಎಂದಳು. ಅಪ್ಪನ ಪುಸ್ತಕದ ವಿಷಯದಲ್ಲಿ ಶಶಿಗೆ ಎಳ್ಳಷ್ಟೂ ಉತ್ಸಾಹವಿರಲಿಲ್ಲ.

ಸ್ವಲ್ಪ ಹೊತ್ತಾದಮೇಲೆ ಅವಳನ್ನು ಗದರಿಸಿಕೊಂಡು "ಛಿ, ಮಗು, ಅಪ್ಪನ ಪುಸ್ತಕವನ್ನು ಹಾಗೆ ಹಾಳುಮಾಡುವುದೆ? ಅದನ್ನ ಕಮಲಕ್ಕನ ಕೈಗೆ ಕೊಡು. ಆಕೆ ಅದನ್ನು ಅಲಮಾರಿಯ ಮೇಲಿಡಲಿ."

ಪುಸ್ತಕಕ್ಕೇನಾದರೂ ಜೀವವಿದ್ದಿದ್ದಾದರೆ ಆ ಒಂದು ದಿನದ ಹಿಂಸೆಯಲ್ಲಿ ವೇದಾಂತದ ಪ್ರಾಣಾಂತವಾಗುತ್ತಿತ್ತು.

ಒಂದೊಂದಾಗಿ ಪತ್ರಿಕೆಯಲ್ಲಿ ವಿಮರ್ಶೆ ಬರತೊಡಗಿತು. ಹೆಂಡತಿ ಹೇಳಿ

ದ್ದೆಲ್ಲಾ ಅದರಲ್ಲಿ ಬಹು ಭಾಗ ನಿಜವಾಯಿತು. ಗ್ರಂಥದ ಒಂದಕ್ಷರವನ್ನು ಅರ್ಥ ಮಾಡಿಕೊಳ್ಳಲಾರದೆ ಸೀಮೆಯ ವಿಮರ್ಶಕರೆಲ್ಲ ಒಮ್ಮೆಗೇ ವಿಹ್ವಲರಾದರು. "ಇಂತ ಸಾರವುಳ್ಳ ಗ್ರಂಥ ಇದಕ್ಕೆ ಮುಂಚೆ ಪ್ರಕಟವಾಗಲಿಲ್ಲ" ಎಂದು ಎಲ್ಲರೂ ಒಕ್ಕೊರಲಿನಿಂದ ಹೇಳಿದರು.

ರೆನಾಲ್ಡ್ಸನ "ಲಂಡನ್ ರಹಸ್ಯ"ದ ಬಂಗಾಲೀ ಅನುವಾದವಲ್ಲದೆ ಬೇರೆ ಪುಸ್ತಕಗಳನ್ನು ಮುಟ್ಟದ ವಿಮರ್ಶಕರುಗಳೂ ಅತಿ ಉತ್ಸಾಹದಿಂದ "ನಮ್ಮ ದೇಶದಲ್ಲಿ ಹೊರೆ ಹೊರೆಯಾಗಿ ಅಚ್ಚಾಗುವ ನಾಟಕ, ನಾವೆಲ್‌ಗಳ ಬದಲು ಇಂತಹ ಒಂದೆರಡು ಪುಸ್ತಕಗಳು ಮಧ್ಯೆ ಮಧ್ಯೆ ಹೊರಬಿದ್ದರೆ ಆಗ ಬಂಗಾಳೀ ಸಾಹಿತ್ಯ ವಾಸ್ತವವಾಗಿ ಓದಲರ್ಹವಾಗುವುದು" ಎಂದು ಬರೆದರು.

ತಲೆತಲಾಂತರದಿಂದ ವೇದಾಂತದ ಹೆಸರನ್ನೇ ಕೇಳದಿದ್ದವನೂ "ತಾರಾಪ್ರಸನ್ನ ಬಾಬುಗಳ ಸಂಗಡ ಎಲ್ಲಿಡೆಯಲ್ಲೂ ನನ್ನ ಅಭಿಪ್ರಾಯ ಹೊಂದದು ಸ್ಥಾನಾಭಾವದಿಂದ ಇಲ್ಲಿ ಅದನ್ನು ಉಲ್ಲೇಖಿಸೆನು. ಆದರೆ ಒಟ್ಟಿನಲ್ಲಿ ಗ್ರಂಥಕರ್ತರೊಡನೆ ನನ್ನ ಅಭಿಮತ ಹಲವೆಡೆಗಳಲ್ಲಿ ಒಂದಾಗಿದೆ" ಎಂದು ಬರೆದಿದ್ದನು. ಈ ಮಾತು ನಿಜವೇ ಆಗಿದ್ದರೆ ಪುಸ್ತಕ ಬೆಂಕಿಯಲ್ಲಿ ಸುಟ್ಟು ಬೂದಿಮಾಡಿದರೆ ಉತ್ತಮ ಎಂದಹಾಗಾಯಿತು. ಸೀಮೆಯಲ್ಲಿ ಎಲ್ಲೆಲ್ಲೋ ಇದ್ದ ಇಲ್ಲದ ಪುಸ್ತಕಭಂಡಾರಗಳ ಕಾರ್ಯದರ್ಶಿಗಳು ಮುದ್ರೆ*ಗಳಿಗೆ ಬದಲಾಗಿ ಮುದ್ರೆ ಒತ್ತಿದ ಕಾಗದದಲ್ಲಿ ತಾರಾಪ್ರಸನ್ನರ ಪುಸ್ತಕವನ್ನು ಭಿಕ್ಷೆ ಬೇಡಿದರು. "ನಿಮ್ಮ ಈ ಚಿಂತಾಶೀಲ ಗ್ರಂಥದಿಂದ ದೇಶದ ಕೊರತೆಯೊಂದು ದೂರವಾಯಿತು" ಎಂದು ಹಲವರು ಬರೆದರು. ಚಿಂತಾಶೀಲ ಗ್ರಂಥವೆಂದು ಹೇಳುವುದು ಯಾವುದಕ್ಕೆ ಎಂಬುದನ್ನು ತಾರಾಪ್ರಸನ್ನ ಸರಿಯಾಗಿ ತಿಳಿದುಕೊಳ್ಳಲಾರದೆ ಹೋದನು. ಆದರೆ ಪುಳಕಿತ ಹೃದಯನಾಗಿ ಕೈಯಿಂದ ಅಂಚೆಯ ವೆಚ್ಚ ಕೊಟ್ಟು ಒಂದೊಂದು ಪುಸ್ತಕಭಂಡಾರಕ್ಕೂ "ವೇದಾಂತ ಪ್ರಭಾಕರ" ಕಳುಹಿಸಿಕೊಟ್ಟನು.

ಈ ರೀತಿ ಕೊನೆಯಿಲ್ಲದ ಹೊಗಳಿಕೆಯಲ್ಲಿ ತಾರಾಪ್ರಸನ್ನ ಅಳತೆ ಮೀರಿ ಉಬ್ಬಿರುವಾಗ ಐದನೆಯ ಮಗುವಿನ ಬರುವಿಕೆ ಬಹು ಸಮೀಪ

---

*ಮುದ್ರೆ—ರೂಪಾಯಿ.

ವಾಯಿತೆಂದು ದಾಕ್ಷಾಯಣಿಯು ಕಾಗದ ಬಂದಿತು. ಆಗ ರಕ್ಷಕನಾಗಿ ಬಂದಿದ್ದವನನ್ನು ಸಂಗಡ ಕರೆದುಕೊಂಡು ಹಣ ಶೇಖರಿಸಲು ಅಂಗಡಿಗಳಿಗೆ ಹೋದನು.

ಒಂದು ಪುಸ್ತಕವೂ ಮಾರಾಟವಾಗಿಲ್ಲವೆಂದು ಅಂಗಡಿಯವರೆಲ್ಲರೂ ಒಂದೇ ಮಾತು ಹೇಳಿದರು. ಒಂದು ಅಂಗಡಿಯಲ್ಲಿ ಮಾತ್ರ ಪರಸ್ಥಳದಿಂದ ಒಂದು ಪುಸ್ತಕ ಕಳುಹಿಸುವಂತೆ ಬೇಡಿಕೆ ಬಂದಿತ್ತೆಂದೂ, ಅದನ್ನು ವಿ ಪಿ. ಯಲ್ಲಿ ಕಳುಹಿಸಲು ವಿಳಾಸದಾರ ಅದನ್ನು ತೆಗೆದುಕೊಳ್ಳದೆ ಹೋಗಲು ಅದು ಹಿಂದಕ್ಕೆ ಬಂದಿತೆಂದು ಹೇಳಿದನು. ಅಂಗಡಿಯವನಿಗೆ ಅಂಚೆಯ ವೆಚ್ಚ ದಂಡವಾಯಿತು. ಅದಕ್ಕಾಗಿ ಅತಿ ಕೋಪದಿಂದ ಎಲ್ಲ ಪುಸ್ತಕಗಳನ್ನೂ ಆಗಲೇ ಹಿಂದಕ್ಕೆ ಕೊಟ್ಟುಬಿಟ್ಟನು.

ಗ್ರಂಥಕರ್ತ ಮನೆಗೆ ಹಿಂದಿರುಗಿ ಬಹಳ ಯೋಚಿಸಿದನು. ಏನೂ ತೋಚಲಿಲ್ಲ. ತನ್ನ ಚಿಂತಾಶೀಲ ಗ್ರಂಥದ ವಿಷಯವಾಗಿ ಎಷ್ಟು ಚಿಂತಿಸಿದರೂ ಅಷ್ಟು ಉದ್ವೇಗ ಹೆಚ್ಚುತ್ತಿದ್ದಿತು ಕೊನೆಗೆ ಕೈಯಲ್ಲಿ ಉಳಿದಿದ್ದಷ್ಟು ಹಣವನ್ನು ಉಪಯೋಗಿಸಿಕೊಂಡು ಊರಿನ ಕಡೆಗೆ ಹೊರಟನು.

ತಾರಾಪ್ರಸನ್ನ ಮನೆಗೆ ಬಂದು ಗೃಹಿಣಿಯ ಬಳಿ ಅತ್ಯಂತ ಆಡಂಬರದೊಡನೆ ಪ್ರಫುಲ್ಲತೆ ತೋರಿದನು. ದಾಕ್ಷಾಯಣಿ ನಗುಮುಖದೊಡನೆ ಶುಭ ಸಂವಾದವನ್ನು ಇದಿರುನೋಡುತ್ತಿದ್ದಳು.

ಆಗ ತಾರಾಪ್ರಸನ್ನ "ಗೌಡ ವಾರ್ತಾವಹ" ಪತ್ರಿಕೆಯನ್ನು ತಂದು ಗೃಹಿಣಿಯ ಮಡಿಲಲ್ಲಿ ಹಾಕಿದನು. ಓದಿ ಆಕೆ ಸಂಪಾದಕರ ಧನ ಪುತ್ರ ಸೌಭಾಗ್ಯ ಅಕ್ಷಯವಾಗಲೆಂದು ಮನಸ್ಸಿನಲ್ಲೇ ಹರಸಿದಳು. ಮಾನಸಿಕ ಪುಷ್ಪ ಚಂದನಗಳನ್ನು ಅವರಿಗೆ ಅರ್ಪಿಸಿದಳು. ಓದಿ ಮುಗಿಸಿ ಮತ್ತೆ ಗಂಡನ ಮುಖ ನೋಡಿದಳು.

ಆಗ ತಾರಾಪ್ರಸನ್ನ 'ನವಪ್ರಭಾತ' ತಂದು ತೆರೆದಿಟ್ಟ. ಓದಿ ಆನಂದ ವಿಹ್ವಲಳಾದ ದಾಕ್ಷಾಯಣಿ ಆಶಾಪೂರಿತ ಸ್ನಿಗ್ಧ ನೇತ್ರಗಳನ್ನು ಗಂಡನ ಕಡೆಗೆ ತಿರುವಿದಳು.

ಆಗ ತಾರಾಪ್ರಸನ್ನ ಒಂದು ಪ್ರತಿ 'ಯುಗಾಂತರ' ಹೊರಗೆಡವಿದನು. ಅನಂತರ 'ಭಾರತಭಾಗ್ಯ ಚಕ್ರ', ಅನಂತರ 'ಶುಭ ಜಾಗರಣ್',

ಅನಂತರ 'ಅರುಣಾಲೋಕ', ಅದಾದಮೇಲೆ 'ಸಂವಾದತರಂಗ ಭಂ', ಆದರನಂತರ 'ಆಶಾ,' 'ಆಗಮನೀ,' 'ಉಚ್ಛ್ವಾಸ್,' 'ಪುಷ್ಪಮಂಜರಿ,' 'ಸಹಚರೀ,' 'ಸೀತಾ ಗೆಜಟ್,' 'ಅಹಲ್ಯಾ ಲೈಬ್ರೆಂ ಪ್ರಕಾಶಿಕೆ,' 'ಲಲಿತ ಸಮಾಚಾರ,' 'ಕೊತ್ವಾಲ್,' 'ವಿಶ್ವವಿಚಾರಣ,' 'ಲಾವಣ್ಯಲತಿಕೆ.' ನಗುತ್ತ ನಗುತ್ತ ಗೃಹಿಣಿಗೆ ಆನಂದಾಶ್ರು ಹೊಮ್ಮಿಬಂದಿತು.

ಕಣ್ಣೊರಸಿಕೊಂಡು ಮತ್ತೊಮ್ಮೆ ಕೀರ್ತಿರಶ್ಮಿಯಿಂದ ಹೊಳೆಯುವ ಗಂಡನ ಮುಖ ನೋಡಿದಳು—ಆತ "ಇನ್ನೂ ಬಹಳ ಪತ್ರಿಕೆಗಳಿವೆ" ಎಂದನು.

'ಅವನ್ನು ಮಧ್ಯಾಹ್ನ ನೋಡೋಣ ಈಗ ಉಳಿದ ಸುದ್ದಿ ಹೇಳಿ' ಎಂದು ದಾಕ್ಷಾಯಣಿ ಹೇಳಿದಳು.

ತಾರಾಪ್ರಸನ್ನ "ಈ ಸಾರಿ ಕಲ್ಕತ್ತೆಯಲ್ಲಿದ್ದಾಗ ಗವರ್ನರರ ಮೇಮ್ ಸಾಹೆಬರು ಪುಸ್ತಕವೊಂದನ್ನು ಹೊರಡಿಸಿರುವರು" ಎಂದು ಕೇಳಿದೆ. ಆದರೆ ಆದರಲ್ಲಿ 'ವೇದಾಂತ ಪ್ರಭಾಕರ'ದ ವಿಷಯ ಏನೂ ಹೇಳಿಲ್ಲ.

'ಆಯಿತು. ಆ ಮಾತೆಲ್ಲ ಇರಲಿ. ಮತ್ತೇನು ತಂದಿರಿ ಹೇಳಿ' ಎಂದು ದಾಕ್ಷಾಯಣಿ ಕೇಳಿದಳು.

ತಾರಾಪ್ರಸನ್ನ—'ಹಲವು ಕಾಗದಗಳಿವೆ' ಎಂದನು.

ದಾಕ್ಷಾಯಣಿ ಆಗ ಸ್ಪಷ್ಟವಾಗಿ 'ಹಣ ಎಷ್ಟು ತಂದಿರುವಿರಿ?' ಎಂದು ಕೇಳಿದಳು. 'ವಿಧುಭೂಷಣನ ಹತ್ತಿರ ಐದು ರೂಪಾಯಿ ಜೈಸಾಲ ತಂದಿರುವೆ' ಎಂದನು.

ಕೊನೆಯದಾಗಿ, ದಾಕ್ಷಾಯಣಿ ಎಲ್ಲ ವೃತ್ತಾಂತವನ್ನೂ ಕೇಳಿದನಂತರ ಪ್ರಪಂಚದ ಸಾಧುತೆಯ ವಿಷಯದಲ್ಲಿ ಅವಳ ಅಭಿಪ್ರಾಯ ಸಂಪೂರ್ಣವಾಗಿ ಬದಲಾಯಿತು. 'ಅಂಗಡಿಯವರು ಖಂಡಿತ ಗಂಡನಿಗೆ ಮೋಸಮಾಡಿರುವರು ಮತ್ತು ಬಂಗಾಳ ದೇಶದ ಕೊಳ್ಳುವವರೆಲ್ಲರೂ ಮಸಲತ್ತು ಮಾಡಿ ವರ್ತಕರನ್ನು ಮೋಸಗೊಳಿಸಿರುವರು' ಎಂದು ನಿರ್ಣಯಿಸಿದಳು.

ಕೊನೆಗೆ ತನ್ನ ಪ್ರತಿನಿಧಿಯಾಗಿ ಗಂಡನ ಸಂಗಡ ಕಳುಹಿಸಿದ್ದಳಲ್ಲ ಆ ವಿಧುಭೂಷಣ 'ಅಂಗಡಿಯವರೊಡನೆ ಒಳಗೊಳಗೆ ಸಂಚು ನಡೆಸಿರುವನು' ಎಂದು ಅವಳಿಗೆ ತೋರಿತು. ದಿನಕಳೆದಹಾಗೆಲ್ಲ—ಆಚೆಯ ಬೀದಿಯ

ವಿಶ್ವಂಭರ ಚಟರ್ಜಿ ತನ್ನ ಗಂಡನ ಪರಮ ಶತ್ರು. ಇದೆಲ್ಲ ಖಂಡಿತ ಅವನ ಒಳಸಂಚಿನಿಂದ ನಡೆದಿರುವುದೆಂದು ಅವಳಿಗೆ ದೃಢವಾಯಿತು. ಅದಕ್ಕೇ ಮತ್ತೆ ತನ್ನ ಗಂಡ ಕಲ್ಕತ್ತೆಗೆ ಹೋದ ಎರಡು ದಿನಗಳ ಅನಂತರ ಆಲದ ಮರದಡಿಯಲ್ಲಿ ವಿಶ್ವಂಭರ ನಿಂತುಕೊಂಡು ಕಾನಾಯಿ ಪಾಲ್‌ನ ಜೊತೆಯಲ್ಲಿ ಮಾತನಾಡುತ್ತಿದ್ದನು. ಆದರೆ ಆಗ ವಿಶ್ವಂಭರ ಕಾನಾಯಿಯೊಡನೆ ಆಗಾಗ್ಯೆ ಮಾತಾಡುತ್ತಿದ್ದನೆಂಬುದು ಖಂಡಿತವಾಗಿರಲಿಲ್ಲ. ಈಗ ಎಲ್ಲ ನೀರಿನಹಾಗೆ ಗೊತ್ತಾಯಿತು.

ಇತ್ತ ದಾಕ್ಷಾಯಣಿಯ ಸಾಂಸಾರಿಕ ಸಂಕಟಗಳು ಕ್ರಮೇಣ ಹೆಚ್ಚುತ್ತಲಿದ್ದವು. ಹಣ ಸಂಪಾದಿಸಲು ಈ ಸುಲಭವಾದ ದಾರಿ ನಿಷ್ಫಲವಾಗಲು ಹೆಣ್ಣು ಹೆತ್ತುದರ ತಪ್ಪು ಅವಳನ್ನು ಒಳಗೊಳಗೆ ಸುಡತೊಡಗಿತು. ವಿಶ್ವಂಭರ, ವಿಧುಭೂಷಣ ಅಥವಾ ಬಂಗಾಳ ದೇಶದ ನಿವಾಸಿಗಳನ್ನು ಈ ತಪ್ಪಿಗೆ ಹೊಣೆಗಾರರೆನಲು ಸಾಧ್ಯವಿರಲಿಲ್ಲ. ಎಲ್ಲ ಅಪರಾಧವನ್ನೂ ತನ್ನ ಹೆಗಲಮೇಲೆಯೇ ಹೊತ್ತುಕೊಂಡಳು. ಬರಿಯ ಹೆಣ್ಣುಗಳೇ ಹುಟ್ಟಿದಲ್ಲ — ಅದಕ್ಕಾಗಿ ಅವರಿಗೂ ಸ್ವಲ್ಪ ಕೊಟ್ಟಳು. ಅಹೋರಾತ್ರಿ ಮುಹೂರ್ತ ಮಾತ್ರವೂ ಅವಳಿಗೆ ನೆಮ್ಮದಿಯಿರಲಿಲ್ಲ.

ಹೆರಿಗೆಯ ಸಮಯ ಹತ್ತಿರವಾದಾಗ ಮನೆಯವರೆಲ್ಲರಿಗೂ ಅವಳ ದೇಹಸ್ಥಿತಿಯ ವಿಷಯದಲ್ಲಿ ಹೆದರಿಕೆಯುಂಟಾಗುವಷ್ಟು ಅವಳ ವ್ಯೈ ಕೆಟ್ಟಿತ್ತು. ದಾರಿಗಾಣದೆ ತಾರಾಪ್ರಸನ್ನ ಹುಚ್ಚನಂತಾಗಿ ವಿಶ್ವಂಭರನ ಬಳಿಗೆ ಹೋಗಿ "ಅಣ್ಣಾ, ಒಂದು ಐವತ್ತು ಅರವತ್ತು ಪುಸ್ತಕಗಳನ್ನು ಒತ್ತೆಯಿಟ್ಟುಕೊಂಡು ಸ್ವಲ್ಪ ಹಣ ಕೊಡು. ನಾನು ಪಟ್ಟಣದಿಂದ ಅನುಭವಸ್ಥಳಾದ ಸೂಲಗಿತ್ತಿಯನ್ನು ಕರೆಸುವೆನು" ಎಂದನು.

ವಿಶ್ವಂಭರ ಆಗ—'ತಮ್ಮಾ, ಅದಕ್ಕಾಗಿ ಯೋಚಿಸಬೇಡ. ಆವಶ್ಯಕವಿರುವಷ್ಟು ಹಣ ನಾನು ತಂದುಕೊಡುವೆ. ನೀನು ಪುಸ್ತಕ ತೆಗೆದುಕೊಂಡು ಹೋಗು' ಎಂದನು. ಹೀಗೆ ಹೇಳಿ ಕಾನಾಯಿಪಾಲನಿಗೆ ಬಹಳ ಹೇಳಿ ಕೇಳಿ ಸ್ವಲ್ಪ ಹಣ ಸಂಗ್ರಹಿಸಿ ತಂದು ಕೊಟ್ಟನು. ಮತ್ತು ಸ್ವತಃ ಕಲ್ಕತ್ತೆಗೆ ಹೋಗಿ ದಾರಿಯ ವೆಚ್ಚ ತನ್ನ ಕೈಯಿಂದಲೇ ಕೊಟ್ಟು ಸೂಲಗಿತ್ತಿಯೊಬ್ಬಳನ್ನು ಕರೆತಂದನು.

ಏನನ್ನು ಯೋಚಿಸಿಯೋ ಏನೋ ದಾಕ್ಷಾಯಣಿ ಗಂಡನನ್ನು ತನ್ನ ಕೊಠಡಿಗೆ ಕರೆಸಿ ಆಣೆಯಿಟ್ಟುಕೊಂಡು "ನಿಮಗೆ ಆ ಶೂಲೆ ಬಂದುದಾದರೆ ಆ ಸ್ವಪ್ನಲಬ್ಧ ಔಷಧ ಸೇವಿಸಲು ಮರೆಯಬೇಡಿ. ಮತ್ತೆ ಆ ಸಂನ್ಯಾಸಿ ಕೊಟ್ಟಿರುವ ಯಂತ್ರವನ್ನು ಖಂಡಿತ ಬಿಚ್ಚಿಬಿಡಬೇಡಿರಿ" ಎಂದಳು. ಈ ತರಹದ ಸಾವಿರಾರು ಸಣ್ಣ ಪುಟ್ಟ ವಿಷಯಗಳನ್ನು ಗಂಡನ ಕೈಮೇಲೆ ಕೈಹಾಕಿ ಒಪ್ಪಿಸಿದಳು. "ವಿಧುಭೂಷಣನನ್ನು ಸ್ವಲ್ಪ ನಂಬಲಾಗದು ಅವನೇ ಗಂಡನನ್ನ ಹಾಳು ಮಾಡಿದವನು" ಎಂದಳು. ಇಲ್ಲದಿದ್ದರೆ ಔಷಧ ತಾಯಿತಿ, ಯಂತ್ರ ಮಂತ್ರ, ಆಣೆ ಭಾಷೆಗಳು — ಇವೆಲ್ಲವುಗಳ ಸಂಗಡ ಗಂಡನನ್ನು ಅವನ ಕೈಯಲ್ಲಿ ಒಪ್ಪಿಸಿ ನಡೆಯುತ್ತಿದ್ದಳು. ಅನಂತರ ಮಹೇಶ್ವರನಂತೆ ಎಲ್ಲರನ್ನೂ ನಂಬುವ ತನ್ನನ್ನು, ತಾನು ಮರೆಯುವ ಸ್ವಭಾವದ ಗಂಡನನ್ನು, ಪ್ರಪಂಚದ ಕುಟಿಲತೆ ವಂಚನೆಗಳಿಂದ ಎಚ್ಚರದಿಂದಿರುವಂತೆ ಬಾರಿಬಾರಿಗೆ ಹೇಳಿದಳು ಕೊನೆಯಲ್ಲಿ ಮೆಲ್ಲಮೆಲ್ಲನೆ "ನೋಡಿ, ನನಗೆ ಹೆಣ್ಣು ಹುಟ್ಟುವುದಿಲ್ಲ. ಅದೇನಾದರೂ ಬದುಕಿದರೆ ಅದಕ್ಕೆ 'ವೇದಾಂತಪ್ರಭಾ' ಎಂದು ಹೆಸರಿಡಬೇಕು ಮುಂದೆ ಅವಳನ್ನ 'ಪ್ರಭಾ' ಎಂದು ಕರೆದರೆ ಸಾಕು" ಎಂದಳು.

ಇಷ್ಟು ಹೇಳಿ ಗಂಡನ ಕಾಲುಮುಟ್ಟಿ ಪಾದಧೂಳಿಯನ್ನು ತಲೆಯಲ್ಲಿ ಧರಿಸಿದಳು. "ಕೇವಲ ಹೆಣ್ಣು ಹೆರುವುದಕ್ಕಾಗಿಯೇ ಗಂಡನ ಮನೆಗೆ ಬಂದಿದ್ದೆ. ಈ ಸಲ ಆ ಆಪತ್ತು ಕಳೆದುಹೋಗುವಂತೆ ಕಾಣುತ್ತೆ" ಎಂದು ಅಂದುಕೊಂಡಳು.

"ಅಮ್ಮಾ, ಒಂದುಸಲ ನೋಡಿ. ಹೆಣ್ಣು ಮಗು ಎಷ್ಟು ಅಂದವಾಗಿದೆ" ಎಂದು ಸೂಲಗಿತ್ತಿ ಹೇಳಿದಳು ತಾಯಿ ಒಂದಾವರ್ತಿ ಕಣ್ಣುಗಳನ್ನು ಅರಳಿಸಿದಳು. ಮೆಲುದನಿಯಲ್ಲಿ "ವೇದಾಂತಪ್ರಭಾ" ಎಂದಳು. ಅನಂತರ ಈ ಪ್ರಪಂಚದಲ್ಲಿ ಇನ್ನೊಂದು ಮಾತು ಆಡಲೂ ಅವಕಾಶ ಪಡೆಯಲಿಲ್ಲ.

# ಜಯ ಪರಾಜಯ

ರಾಜಪುತ್ರಿಯ ಹೆಸರು ಅಪರಾಜಿತೆ. ಉದಯನಾರಾಯಣನ ಆಸ್ಥಾನ ಕವಿ ಶೇಖರ ಅವಳನ್ನು ಎಂದೂ ಕಣ್ಣಾರ ಕಂಡಿರಲಿಲ್ಲ. ಆದರೆ ಯಾವದಾದರೊಂದು ಹೊಸ ಕಾವ್ಯ ರಚಿಸಿ ಸಭೆಯಲ್ಲಿ ಕುಳಿತು ರಾಜನ ಮುಂದೆ ಪಠಿಸುತಿದ್ದಾಗ ಮೇಲುಪ್ಪರಿಗೆಯ ಕಿಟಕಿಯ ಬಳಿ ಮರೆಯಾಗಿರುತ್ತಿದ್ದ ಶ್ರೋತ್ರೀವೃಂದದ ಕಿವಿಗೆ ಕೇಳಿಸುವಷ್ಟು ಗಟ್ಟಿಯಾಗಿ ತನ್ನ ಕೊರಲ ದನಿ ಏರಿಸುತಿದ್ದನು. ನಕ್ಷತ್ರ ರಾಶಿಯ ನಡುವೆ ಅವನ ಬಾಳುವೆಯ ಅಪರಿಚಿತ ಶುಭಗ್ರಹವೊಂದು ಕಣ್ಣಿಗೆ ಕಾಣದ ಮಹಿಮೆಯಿಂದ ವಿರಾಜಿಸುತ್ತಿದೆಯೋ, ತನ್ನ ಸಂಗೀತದ ನಾದವನ್ನು ಹೋಗಲಸಾಧ್ಯವಾದ ಆ ನಕ್ಷತ್ರಲೋಕಕ್ಕೆ ಕಳುಹಿಸುತಿರುವನೋ ಎಂದು ತೋರುತ್ತಿತ್ತು.

ಒಮ್ಮೆ ಛಾಯೆಯಂತೆ ಕಾಣುತ್ತಿದ್ದನು. ಒಮ್ಮೆ ಗೆಜ್ಜೆಯ ದನಿಯಂತೆ ಸದ್ದು ಕೇಳಿಸುತ್ತಿತ್ತು. ಕುಳಿತಹಾಗೆಯೇ ಆ ಚರಣಗಳೆರಡು ಹೇಗಿವೆ—ಚಿನ್ನದ ಗೆಜ್ಜೆ ಕಟ್ಟಿ ಹೆಜ್ಜೆ ಹೆಜ್ಜೆಗೆ ಸಂಗೀತ ಹಾಡುವ ಆ ಚರಣಗಳು ಹೇಗಿವೆ ಎಂದು ಯೋಚಿಸುತಿದ್ದನು. ಕೆಂಬಣ್ಣದ ಶುಭ್ರವಾದ ಆ ಚರಣಕಮಲಗಳೆರಡು ಪ್ರತಿ ಹೆಜ್ಜೆಗೂ ಅದೆಂತಹ ಸೌಭಾಗ್ಯ, ಅದೆಂತಹ ಅನುಗ್ರಹ, ಅದೆಂತಹ ಕರುಣೆಯಂತೆ ಭೂಮಿಯನ್ನು ಸೋಕುವುದು. ಮನಸ್ಸಿನ ಅಂತರ್ಪಟದಲ್ಲಿ ಆ ಚರಣಗಳೆರಡನ್ನು ಸ್ಥಾಪಿಸಿಕೊಂಡು ಕವಿ ಬಿಡುವಿನ ವೇಳೆಯಲ್ಲಿ ಅಲ್ಲಿಗೆ ಬಂದು ತಲುಪುತಿದ್ದನು ಮತ್ತು ಆ ಗೆಜ್ಜೆಯ ಸದ್ದಿನಲ್ಲಿ ತನ್ನ ಹಾಡು ಕಟ್ಟುತಿದ್ದನು.

ಆದರೆ ಅವನು ಕಾಣುತಿದ್ದ ಛಾಯೆ, ಕೇಳಿದ್ದ ಗೆಜ್ಜೆಯ ಸದ್ದು, ಅದು ಯಾರ ಛಾಯೆ, ಯಾರ ಗೆಜ್ಜೆ ಎಂಬ ತರ್ಕ. ಅಂತಹ ಸಂಶಯ ಅವನ ಭಕ್ತಹೃದಯದಲ್ಲಿ ಎಂದೂ ಮೂಡಿರಲಿಲ್ಲ

ರಾಜಕನ್ಯೆಯ ದಾಸಿ ಮಂಜರಿ ಸ್ನಾನಘಟ್ಟಕ್ಕೆ ಹೋಗುತ್ತಿದ್ದಾಗ ಶೇಖರನ ಮನೆಯ ಮುಂದೆಯೇ ಅವಳ ಹಾದಿ ಇತ್ತು. ಹೋಗುವಾಗ ಬರುವಾಗ ಕವಿಯೊಡನೆ ಒಂದೆರಡು ಮಾತು ಆಡದೆ ಅವಳು ಹೋಗುತಿರಲಿಲ್ಲ. ಜನಶೂನ್ಯವಾಗಿದ್ದರೆ ಅವಳು ಶೇಖರನ ಮನೆಯೊಳಕ್ಕೆ ಹೋಗಿಯೂ ಕುಳಿತುಕೊಳ್ಳು

ತಿದ್ದಳು. ಅವಳು ಎಷ್ಟು ಬಾರಿ ಘಟ್ಟಕ್ಕೆ ಹೋದರೂ—ಅಷ್ಟೊಂದು ಬಾರಿ ಹೋಗಬೇಕಾದ ಆವಶ್ಯಕತೆ ಇದ್ದಂತಿಲ್ಲ, ಒಂದು ವೇಳೆ ಆವಶ್ಯಕತೆಯಿದ್ದರೂ ಇರಬಹುದು; ಘಟ್ಟಕ್ಕೆ ಹೋಗುವಾಗ ಅವಸರದ ನಡುವೆಯೇ ಸ್ವಲ್ಪ ಜಾಗರೂಕತೆಯಿಂದ ಒಂದು ಬಣ್ಣ ಕಟ್ಟಿದ ಸೀರೆ ಉಟ್ಟು ಕಿವಿಯ ಬಳಿ ಎರಡು ಮಾವಿನಮೊಗ್ಗು ಸಿಕ್ಕಿಸಿಕೊಳ್ಳುವ ಆವಶ್ಯಕತೆ ಕಾಣಿಸುತ್ತಿರಲಿಲ್ಲ.

ಜನರು ಹುಸಿನಗೆ ನಗುತ್ತಿದ್ದರು. ಪಿಸುಗುಟ್ಟುತ್ತಿದ್ದರು. ಜನರ ತಪ್ಪೇನೂ ಇರಲಿಲ್ಲ. ಮಂಜರಿಯನ್ನು ಕಂಡರೆ ಶೇಖರ ಅತ್ಯಾನಂದಪಡು ತಿದ್ದನು. ಅದನ್ನು ಮರೆಮಾಚಿಡಲೂ ಅವನು ಇಷ್ಟಾಗಿ ಪ್ರಯಾಸಪಡುತ್ತಿರಲಿಲ್ಲ

ಅವಳ ಹೆಸರು ಮಂಜರಿ. ಆಲೋಚಿಸಿ ನೋಡಿದರೆ ಸಾಮಾನ್ಯ ಜನರ ಮಟ್ಟಿಗೆ ಆ ಹೆಸರೇ ಸಾಕಾಗುತ್ತು. ಆದರೆ ಶೇಖರ ಇಷ್ಟಿಷ್ಟು ಕವಿತ್ವ ಪ್ರಕಾಶ ಪಡಿಸಿ ಅವಳನ್ನು 'ವಸಂತಮಂಜರೀ' ಎಂದು ಕರೆಯುತ್ತಿದ್ದನು. ಕೇಳಿದ ಜನರು 'ಹೆಂಕಿ ಹಾಕಿತು' ಎಂದು ಅನ್ನುತ್ತಿದ್ದರು

ಅದರೊಡನೆ ಕವಿಯ ವಸಂತ ವರ್ಣನೆಯಲ್ಲಿ "ಮಂಜುಲ ಮಂಜುಲ ಮಂಜರೀ" ಎಂದು ಮತ್ತಿತಾದ ಅನುಪ್ರಾಸವೂ ನಡು ನಡುವೆ ಕಾಣಬಹು ದಾಗಿತ್ತು. ಅಷ್ಟೇಕೆ, ಜನರ ಪಿಸುಮಾತು ರಾಜನ ಕಿವಿಗೂ ಮುಟ್ಟಿತ್ತು.

ತನ್ನ ಕವಿಯ ಈ ಬಗೆಯ ಅಧಿಕ ರಸಿಕತೆಯನ್ನು ಅರಿತು ರಾಜನಿಗೆ ಆನಂದವಾಗುತ್ತಿತ್ತು—ಆ ವಿಷಯವಾಗಿ ಹಾಸ್ಯಮಾಡುತ್ತಿದ್ದನು. ಶೇಖರನೂ ಆ ಹಾಸ್ಯದಲ್ಲಿ ಭಾಗ ವಹಿಸುತ್ತಿದ್ದನು.

ರಾಜ ನಗುತ್ತ "ಭ್ರಮರ ವಸಂತನ ಸಭೆಯಲ್ಲಿ ಮಾತ್ರವೇ ಸಂಗೀತ ಹಾಡುವುದೇನು" ಎಂದು ಕೇಳುತ್ತಿದ್ದನು.

"ಇಲ್ಲ, ಪುಷ್ಪಮಂಜರಿಯ ಮಧುವನ್ನೂ ಕೂಡ ಸವಿ ನೋಡುತ್ತಿರು ವುದು" ಎಂದು ಕವಿ ಉತ್ತರ ಕೊಡುವನು.

ಈ ರೀತಿಯಲ್ಲಿ ಎಲ್ಲರೂ ನಗುತ್ತಿದ್ದರು, ಆನಂದಿಸುತ್ತಿದ್ದರು ಅಂತಃಪುರ ದಲ್ಲಿ ರಾಜಕುಮಾರಿ ಅಪರಾಜಿತೆಯೂ ಮಂಜರಿಯನ್ನು ಆಗಾಗ್ಗೆ ಹಾಸ್ಯ ಮಾಡುತ್ತಿದ್ದಳೆಂದು ತೋರುತ್ತೆ. ಮಂಜರಿಯೂ ಅದರಿಂದ ಅಸಂತುಷ್ಟಳಾಗು ತಿರಲಿಲ್ಲ.

ಈ ರೀತಿಯಲ್ಲಿ ಸತ್ಯ ಮಿಥ್ಯ ಬೆರೆತು ಮನುಷ್ಯನ ಬಾಳುವೆ ಒಂದು ವಿಧ

ದಲ್ಲಿ ಕಳೆಯುತಿರುವುದು—ಬ್ರಹ್ಮ ಅಷ್ಟು ಸೃಷ್ಟಿಸುವನು. ಅಷ್ಟು ತಾನೇ ಉಂಟುಮಾಡಿಕೊಳ್ಳುವನು ಇನ್ನಷ್ಟು ಸುತ್ತಲ ನಾಲ್ಕು ಜನ ಕಲ್ಪಿಸುವರು. ಹೀಗೆ ಬಾಳುವೆ ಒಂದು ಒಗಟು ಚೌಚೌ ಪ್ರಕರಣ. ಪ್ರಕೃತ ಮತ್ತು ಅಪ್ರಕೃತ ಕಾಲ್ಪನಿಕ ಮತ್ತು ವಾಸ್ತವಿಕವಾದವುಗಳ ಮಿಶ್ರಣ.

ಕವಿ ಹಾಡುವ ಹಾಡುಗಳು ಮಾತ್ರವೇ ಸತ್ಯವೂ ಸಂಪೂರ್ಣವೂ ಆದುವು. ಕೀರ್ತನೆಯ ವಿಷಯ ಅದೇ ರಾಧೆ ಮತ್ತು ಕೃಷ್ಣ—ಅದೇ ಶಾಶ್ವತ ವಾದ ನರ ಮತ್ತು ನಾರಿ—ಅದೇ ಅನಾದಿ ದುಃಖ ಮತ್ತು ಅನಂತ ಸುಖ. ಆ ಕೀರ್ತನೆಯೇ ಕವಿಯ ಯಥಾರ್ಥವಾದ ಸ್ವಂತ ಅಭಿಪ್ರಾಯ. ಆ ಕೀರ್ತ ನೆಯ ಯಥಾರ್ಥತೆಯನ್ನು ಅಮರಾಪುರ ರಾಜನಿಂದ ಆರಂಭಿಸಿ ದೀನದುಃಖಿತ ಪ್ರಜೆಯವರಿಗೆ ಎಲ್ಲರೂ ತಮ್ಮ ತಮ್ಮ ಹೃದಯದಲ್ಲಿ ಪರೀಕ್ಷೆಮಾಡಿದ್ದರು. ಅವನ ಕೀರ್ತನೆಗಳು ಎಲ್ಲರ ನಾಲಗೆಯ ಮೇಲೂ ಇದ್ದುವು ಬೆಳದಿಂಗಳು ಮೂಡಿದೊಡನೆ, ತೆಂಕಣ ಗಾಳಿ ಸ್ವಲ್ಪ ತಲೆದೋರಿದ ಕೂಡಲೆ ತನಗೆ ತಾನೇ ರಾಜ್ಯದ ನಾಲ್ಕು ದಿಕ್ಕಿನಲ್ಲಿ ಅವೆಷ್ಟು ಅರಣ್ಯ, ಎಷ್ಟು ಹಾದಿಗಳು, ಎಷ್ಟೊಂದು ನಾವೆಗಳು, ಎಷ್ಟು ಕಿಟಕಿಗಳು, ಎಷ್ಟೊಂದು ಅಂಗಳ, ಎಲ್ಲೆಡೆಗಳಿಂದಲೂ ಅವನು ರಚಿಸಿದ ಕೀರ್ತನೆಗಳು ಹೊರಹೊಮ್ಮುತ್ತಿದ್ದುವು—ಅವನ ಖ್ಯಾತಿಗೆ ಎಲ್ಲೆಯೇ ಇರುತಿರಲಿಲ್ಲ.

ಹೀಗೆ ಹಲವು ದಿನಗಳು ಕಳೆದುವು. ಕವಿ ಕವನ ಒರೆಯುತಿದ್ದ ರಾಜ ಕೇಳುತಿದ್ದ. ರಾಜಸಭೆಯ ಸಭಿಕರು ಹೊಗಳುತಿದ್ದರು ಮಂಜರಿ ಸ್ನಾನ ಘಟ್ಟಕ್ಕೆ ಹೋಗುತಿದ್ದಳು. ಮತ್ತು ಅಂತಃಪುರದ ಕಿಟಕಿಯಿಂದ ಒಮ್ಮೊಮ್ಮೆ ಒಂದೊಂದು ನೆರಳು ಬೀಳುತಿತ್ತು. ಒಮ್ಮೊಮ್ಮೆ ಗೆಜ್ಜೆಯ ಸದ್ದೂ ಕೇಳಿಸುತಿತ್ತು.

೨

ಈ ಸಮಯದಲ್ಲಿ ದಕ್ಷಿಣ ದೇಶದಿಂದ ದಿಗ್ವಿಜಯೀ ಕವಿಯೊಬ್ಬನು ಶಾರ್ದೂಲವಿಕ್ರೀಡಿತ ವೃತ್ತದಲ್ಲಿ ರಾಜನನ್ನು ಸ್ತುತಿಸುತ್ತ ರಾಜಸಭೆಯಲ್ಲಿ ಬಂದು ನಿಂತನು ಆತ ಸ್ವದೇಶದಿಂದ ಹೊರಬಿದ್ದು ಮಾರ್ಗದಲ್ಲಿದ್ದ ಎಲ್ಲ ರಾಜ ಕವಿಗಳನ್ನೂ ಸೋಲಿಸಿ ಕೊನೆಗೆ ಅಮರಾಪುರಕ್ಕೆ ಬಂದು ತಲುಪಿದ್ದನು.

ರಾಜ ಅತ್ಯಾದರದೊಡನೆ "ಏಹಿ, ಏಹಿ"[1] ಎಂದನು.

ಕವಿ ಪುಂಡರೀಕ ಜಂಭದೊಡನೆ "ಯುದ್ಧಂ ದೇಹಿ"[2] ಎಂದನು.

ರಾಜನ ಮಾನ ಕಾಪಾಡಬೇಕು—ಯುದ್ಧ ನೀಡಲೇ ಬೇಕು. ಆದರೆ ವಾಗ್ಯುದ್ಧ ಯಾವ ರೀತಿಯಲ್ಲಿ ಇರಬೇಕು ಎನ್ನುವ ವಿಷಯದಲ್ಲಿ ಶೇಖರನಿಗೆ ಹೆಚ್ಚು ಅರಿವಿರಲಿಲ್ಲ. ಆತ ಅತ್ಯಂತ ಚಿಂತಿತನೂ ಶಂಕಿತನೂ ಆದನು. ರಾತ್ರಿ ನಿದ್ರೆ ಬರಲಿಲ್ಲ. ಕೀರ್ತಿಶಾಲೀ ಪುಂಡರೀಕನ ದೀರ್ಘ ಬಲಿಷ್ಠ ದೇಹ, ಸುತೀಕ್ಷ್ಣ ವಕ್ರನಾಸಿಕ, ದಂಭದಿಂದ ಎತ್ತಿದ ತಲೆ, ನಾಲ್ಕು ಕಡೆಯೂ ನೋಡತೊಡಗಿತು.

ಬೆಳಗ್ಗೆ ನಡುಗುವ ಎದೆಯೊಡನೆ ಕವಿ ರಣಕ್ಷೇತ್ರದಲ್ಲಿ ಬಂದು ಪ್ರವೇಶಿಸಿದನು. ಮುಂಜಾನೆಯಿಂದ ಸಭಾಸ್ಥಲದಲ್ಲಿ ಜನರು ಕಿಕ್ಕಿರಿದು ತುಂಬಿದ್ದರು. ಗದ್ದಲಕ್ಕೆ ಕೊನೆಯಿರಲಿಲ್ಲ. ಪಟ್ಟಣದಲ್ಲಿ ಇತರ ಕೆಲಸಕಾರ್ಯಗಳೆಲ್ಲವೂ ನಿಂತುಹೋಗಿತ್ತು.

ಕವಿ ಶೇಖರ ಬಹಳ ಕಷ್ಟದೊಡನೆ ಮುಖದಲ್ಲಿ ನಗುವಿನ ಸಂಗಡ ಪ್ರಸನ್ನತೆ ತಂದುಕೊಂಡು ಇದಿರಾಳಿ ಕವಿ ಪುಂಡರೀಕನಿಗೆ ನಮಸ್ಕರಿಸಿದನು—ಪುಂಡರೀಕ ಅಪಾರ ಅಸಡ್ಡೆಯ ಭಾವದಿಂದ ಕೇವಲ ಇಂಗಿತ ಮಾತ್ರದಿಂದ ನಮಸ್ಕಾರ ಹಿಂದಿರುಗಿಸಿ ತನ್ನ ಅನುಯಾಯಿಗಳಾದ ಭಕ್ತವೃಂದದ ಕಡೆ ನೋಡಿ ನಕ್ಕನು.

ಶೇಖರ ಒಮ್ಮೆ ಅಂತಃಪುರದ ಗವಾಕ್ಷದ ಕಡೆ ದೃಷ್ಟಿ ಬೀರಿದನು. ಇವನು ಅಲ್ಲಿಂದ ನೂರುಗಟ್ಟಲೆ ಕುತೂಹಲಭರಿತ ಹರಿಣಾಕ್ಷಿಯರು ಈ ಜನಗಳ ಕಡೆಗೆ ವ್ಯಗ್ರ ದೃಷ್ಟಿ ಬೀರುವರೆಂದು ತಿಳಿದಿದ್ದನು. ಒಮ್ಮೆ ಏಕಾಗ್ರತೆಯಿಂದ ಚಿತ್ತವನ್ನು ಆ ಊರ್ಧ್ವಲೋಕದ ಕಡೆಗೆ ಹರಿಯಬಿಟ್ಟು ತನ್ನ ಜಯಲಕ್ಷ್ಮಿಯನ್ನು ವಂದಿಸಿ ಮನಸ್ಸಿನಲ್ಲೇ—ನನಗೆ ಇಂದು ಜಯವೇನಾದರೂ ಲಭಿಸಿದರೆ ಓ ದೇವೀ, ಓ ಅಪರಾಜಿತೆ, ಆದರಿಂದ ನಿನ್ನ ಹೆಸರು ಸಾರ್ಥಕವಾಗುವುದು ಎಂದು ಹೇಳಿದನು.

ತುತ್ತೂರಿ ಭೇರಿ ಮೊಳಗಿದುವು. ಜಯಧ್ವನಿ ಮಾಡಿ ನೆರೆದ ಜನರೆಲ್ಲ

1 ಏಹಿ ಏಹಿ—ಬನ್ನಿ ಬನ್ನಿ.

2 ಯುದ್ಧಂ ದೇಹಿ—ಯುದ್ಧ ನೀಡಿ.

ಎದ್ದು ನಿಂತರು. ಬಿಳಿಯ ಬಟ್ಟೆ ಉಟ್ಟು ರಾಜಾ ಉದಯನಾರಾಯಣ ಶರತ್ ಪ್ರಭಾತದ ಮೇಘರಾಶಿಯಂತೆ ಧೀರವಾದ ನಡಗೆಯಲ್ಲಿ ಸಭೆಯಲ್ಲಿ ಪ್ರವೇಶಿಸಿ ಸಿಂಹಾಸನವನ್ನೇರಿದನು.

ಪುಂಡರೀಕ ಎದ್ದು ಸಿಂಹಾಸನದ ಇದಿರಿನಲ್ಲಿ ಬಂದು ನಿಂತನು. ದೊಡ್ಡ ಸಭೆ ಸ್ತಬ್ಧವಾಗಿತ್ತು.

ಎದೆ ಉಬ್ಬಿಸಿಕೊಂಡು ಕೊರಳನ್ನು ಸ್ವಲ್ಪ ಮೇಲಕ್ಕೆ ನೀಡಿ ವಿರಾಟ್ ಮೂರ್ತಿ ಪುಂಡರೀಕ ಗಂಭೀರಭಾವದಲ್ಲಿ ಉದಯನಾರಾಯಣನ ಕೀರ್ತಿ ಹಾಡ ಲಾರಂಭಿಸಿದನು. ಕಂಠಸ್ವರ ಭವನದಲ್ಲಿ ಅಡಗಲಾರದೆ ಹೋಯಿತು. ವಿಶಾಲ ಸಭಾಭವನದ ನಾಲ್ಕು ದಿಕ್ಕಿನ ಗೋಡೆಯಲ್ಲಿ, ಕಂಭಗಳಲ್ಲಿ, ಮಾಳಿಗೆಯಲ್ಲಿ ಸಮುದ್ರದ ಅಲೆಗಳಂತೆ ಗಂಭೀರ ಮಂದ್ರಸ್ಥಾಯಿಯಲ್ಲಿ ಆಘಾತ ಪ್ರತಿಘಾತ ಮಾಡತೊಡಗಿತ್ತು. ಆ ಧ್ವನಿಯ ವೇಗದಿಂದ ನೆರೆದಿದ್ದ ಜನರೆಲ್ಲರ ಹೃದಯ ಥರಥರನೆ ಚಂಚಲಗೊಂಡಿತು. ಎಷ್ಟು ಕುಶಲತೆ, ಎಷ್ಟು ನಿಪುಣತೆ. ಉದಯ ನಾರಾಯಣನ ಹೆಸರಿನ ಮೇಲೆ ಎಷ್ಟು ಬಗೆಯ ವ್ಯಾಖ್ಯಾನ. ರಾಜನ ಹೆಸರಿನ ಅಕ್ಷರಗಳನ್ನು ಎಷ್ಟು ಕಡೆಗಳಿಂದ ಎಷ್ಟು ಬಗೆಯಲ್ಲಿ ಹರಡಿದ್ದ ಎಷ್ಟು ಛಂದ, ಅದೆಷ್ಟು ಯಮಕ.

ಪುಂಡರೀಕ ಮುಗಿಸಿ ಕುಳಿತಾಗ ಸ್ವಲ್ಪ ಹೊತ್ತಿನವರೆಗೆ ನಿಶ್ಶಬ್ದವಾದ ಸಭಾಗೃಹ ಅವನ ದನಿಯ ಪ್ರತಿಧ್ವನಿ ಮತ್ತು ಸಹಸ್ರಾರು ಹೃದಯಗಳ ಮಾತಿಲ್ಲದ ವಿಸ್ಮಯದಿಂದ ಗುಯ್‌ಗುಟ್ಟುತಿತ್ತು. ಬಹು ದೂರದೇಶಗಳಿಂದ ಬಂದಿದ್ದ ಪಂಡಿತರು ಬಲಗೈ ಮೇಲಕ್ಕೆತ್ತಿ 'ಸಾಧು, ಸಾಧು' ಎಂದು ಕೂಗಿದರು.

ಆಗ ಸಿಂಹಾಸನದ ಮೇಲಿನಿಂದ ರಾಜ ಶೇಖರನ ಮುಖದ ಕಡೆಗೆ ನೋಡಿದನು. ಶೇಖರನೂ ಭಕ್ತಿ ಪ್ರೀತಿ ಅಭಿಮಾನ ಮತ್ತು ಒಂದು ಬಗೆಯ ಸಂಕೋಚದಿಂದ ತುಂಬಿದ ದೃಷ್ಟಿಯನ್ನು ರಾಜನ ಕಡೆಗೆ ಬೀರಿ ಮೆಲ್ಲನೆ ಎದ್ದು ನಿಂತನು. ಲೋಕರಂಜನೆಗಾಗಿ ರಾಮ ಎರಡನೆಯ ಸಲ ಅಗ್ನಿಪರೀಕ್ಷೆ ಮಾಡ ಬಯಸಿದಾಗ ಸೀತೆಯೂ ಇದೇ ರೀತಿಯ ದೃಷ್ಟಿ ಬೀರಿ ತನ್ನ ಗಂಡನ ಸಿಂಹಾ ಸನದ ಇದಿರಿನಲ್ಲಿ ನಿಂತಳೆಂದು ತೋರುತ್ತೆ.

ಕವಿಯ ದೃಷ್ಟಿ ನೀರವವಾಗಿ ರಾಜನಿಗೆ ಹೀಗೆ ಹೇಳಿಕೊಂಡಿತು:—"ನಾನು ನಿನ್ನವ. ನೀನೇನಾದರೂ ಪ್ರಪಂಚದ ಇದಿರಿನಲ್ಲಿ ನನ್ನನ್ನು ನಿಲ್ಲಿಸಿ ಪರೀಕ್ಷಿಸ

ಬಯಸುವೆಯಾದರೆ ಪರೀಕ್ಷಿಸು. ಆದರೆ—ಮುಂದೆ ಕಣ್ಣು ದೃಷ್ಟಿಯನ್ನು ಕೆಳಗಿಳಿಸಿತು.

ಪುಂಡರೀಕ ಸಿಂಹದಂತೆ ನಿಂತಿದ್ದನು. ಶೇಖರ ನಾಲ್ಕು ದಿಕ್ಕಿನಲ್ಲೂ ಬೇಡರು ಮುತ್ತಿಗೆ ಹಾಕಿದ್ದ ಜಿಂಕೆಯಂತೆ ನಿಂತುಕೊಂಡನು. ತರುಣ ಯುವಕ· ಹೆಂಗಸಿನಂತೆ ನಾಚಿಕೆ ಮತ್ತು ಸ್ನೇಹ. ಕೋಮಲವಾದ ಮುಖ, ಬಿಳುಪಾದ ಕಪಾಲ, ಮೈ ಅತಿಸಣ್ಣ. ನೋಡಿದರೆ ಭಾವದ ಸ್ಪರ್ಶಮಾತ್ರದಿಂದ ಸಂಪೂರ್ಣ ದೇಹ ವೀಣೆಯ ತಂತಿಯಂತೆ ಧ್ವನಿಸುವಂತೆ ತೋರುತಿತ್ತು.

ಶೇಖರ ಮುಖ ಮೇಲಕ್ಕೆ ಎತ್ತದೆ ಮೊದಲು ಅತಿ ಮೆಲ್ಲನೆ ಕವನ ಹೇಳಲು ಆರಂಭಿಸಿದನು. ಮೊದಲು ಒಂದು ಶ್ಲೋಕ ಹೇಳಿದನು. ಯಾರೂ ಅದನ್ನು ಚೆನ್ನಾಗಿ ಕೇಳಲಿಲ್ಲವೆಂದು ತೋರುತ್ತೆ. ಅನಂತರ ಕ್ರಮೇಣ ಮುಖ ಎತ್ತಿದನು ದೃಷ್ಟಿ ಎತ್ತ ಹರಿಸಿದರೂ ಅಲ್ಲಿಂದ ಎಲ್ಲ ಜನ ಮತ್ತು ರಾಜಸಭೆಯ ಕಲ್ಲಿನಗೋಡೆಗಳು ಕರಗಿ ಬಹುದೂರದ ಅತೀತದಲ್ಲಿ ಅಡಗಿದಂತೆ ಅನಿಸಿತು. ಮಧುರವಾದ ಸ್ಫುಟವಾದ ದನಿ ನಡುಗುತ್ತ ನಡುಗುತ್ತ ಉಜ್ವಲ ಅಗ್ನಿಶಿಖೆಯಂತೆ ಮೇಲಕ್ಕೆ ಏಳತೊಡಗಿತು ಪ್ರಾರಂಭದಲ್ಲಿ ರಾಜನ ಚಂದ್ರವಂಶೀಯ ಮೂಲಪುರುಷರ ಚರಿತ್ರೆ ಆರಂಭಿಸಿದನು. ಕ್ರಮ ಕ್ರಮವಾಗಿ ಎಷ್ಟೊಂದು ಯುದ್ಧ, ವಿಗ್ರಹ, ಶೌರ್ಯ, ವೀರ್ಯ, ಯಜ್ಞ, ದಾನ—ಅವೆಷ್ಟು ಮಹದನುಷ್ಠಾನಗಳ ವಿವರಣೆಯೊಡನೆ ಆತನ ರಾಜಚರಿತ್ರೆಯನ್ನು ಆಧುನಿಕ ಕಾಲದವರೆಗೆ ವಿವರಿಸಿದನು. ಕೊನೆಗೆ ಆ ದೂರದ ನೆನಪಿನಲ್ಲಿ ಬದ್ಧವಾಗಿದ್ದ ದೃಷ್ಟಿಯನ್ನು ಹಿಂದಿರುಗಿಸಿ ತಂದು ರಾಜನ ಮುಖದಮೇಲೆ ನೆಲೆಗೊಳಿಸಿದನು. ರಾಜ್ಯದ ಸಮಸ್ತ ಪ್ರಜೆಗಳ ಹೃದಯದ ಮಹತ್ತಾದ ಅವ್ಯಕ್ತ ಪ್ರೀತಿಯನ್ನು ಭಾಷೆಯ ಛಂದದಲ್ಲಿ ಪ್ರತ್ಯಕ್ಷಗೊಳಿಸಿ ಸಭೆಯ ನಡುವೆ ನಿಲ್ಲಿಸಿದನು. ದೂರ ದೂರದಿಂದ ನೂರಾರು ಸಾವಿರಾರು ಪ್ರಜೆಗಳ ಹೃದಯಸ್ರೋತ ಹೊಮ್ಮಿ ಬಂದು ರಾಜನ ಮೂಲಪುರುಷರ ಈ ಅತಿ ಪುರಾತನ ಪ್ರಾಸಾದವನ್ನು ಮಹಾ ಸಂಗೀತದಿಂದ ಪರಿಪೂರ್ಣಗೊಳಿಸಿದಂತೆ ಆಯಿತು. ಇದರ ಪ್ರತಿಯೊಂದು ಇಟ್ಟಿಗೆಯನ್ನೂ ಅವು ಸ್ಪರ್ಶಿಸಿದುವು, ಆಲಿಂಗಿಸಿಕೊಂಡುವು, ಚುಂಬಿಸಿದುವು. ಮೇಲ್ಮಹಡಿಯ ಅಂತಃಪುರದ ಗವಾಕ್ಷದ ಇದಿರಿನಲ್ಲಿ ನಿಂತಿದ್ದ ರಾಜಲಕ್ಷ್ಮಿಸ್ವರೂಪಿಣಿ ಪ್ರಾಸಾದ ಲಕ್ಷ್ಮಿಯ ಚರಣತಲದಲ್ಲಿ ಸ್ನೇಹಾರ್ದ್ರ ಭಕ್ತಿಭಾರದಿಂದ

ಬಿದ್ದು ಹೊರಳಿದವು. ಅನಂತರ ಅಲ್ಲಿಂದ ಹಿಂದಿರುಗಿ ರಾಜನನ್ನು ಮತ್ತು ರಾಜನ ಸಿಂಹಾಸನವನ್ನು ಮಹಾ ಮಹೋಲ್ಲಾಸದೊಡನೆ ನೂರಾರುಸಲ ಪ್ರದಕ್ಷಿಣೆ ಮಾಡತೊಡಗಿದವು. ಕೊನೆಗೆ "ಮಹಾರಾಜರೇ, ಮಾತಿನಲ್ಲಿ ಸೋಲನ್ನೊಪ್ಪಿಕೊಳ್ಳಲು ಎಡೆಯಿದ್ದೀತು. ಆದರೆ ಭಕ್ತಿಯಲ್ಲಿ ಯಾರು ತಾನೆ ಸೋಲಿಸಬಲ್ಲರು" ಎಂದನು. ಹೀಗೆ ಹೇಳಿ ನಡುಗುವ್ವ ಯೊಡನೆ ಕುಳಿತುಕೊಂಡನು ಆಗ ಕಣ್ಣೀರಿನಲ್ಲಿ ಸ್ನಾನಮಾಡಿದ ಪ್ರಜಾಗಣ ಜಯಜಯಕಾರದಿಂದ ಆಕಾಶವನ್ನು ನಡುಗಿಸಲಾರಂಭಿಸಿದರು.

ಸಾಧಾರಣ ಜನಮಂಡಳಿಯ ಈ ಉನ್ಮತ್ತತೆಯನ್ನು ಧಿಕ್ಕಾರದಿಂದ ತುಂಬಿದ ಹಾಸ್ಯದೊಡನೆ ಅಲಕ್ಷ್ಯವಾಗಿ ಕಂಡು ಪುಂಡರೀಕ ಪುನಃ ಎದ್ದು ನಿಂತನು. ಬಲವಾದ ಗರ್ಜನೆಯ ದನಿಯಲ್ಲಿ "ವಾಕ್ಯಕ್ಕಿಂತ ಶ್ರೇಷ್ಠವಾದುದು ಯಾವುದು" ಎಂದು ಕೇಳಿದನು. ಎಲ್ಲರೂ ಮುಹೂರ್ತ ಮಾತ್ರದಲ್ಲಿ ಸ್ತಬ್ಧರಾದರು.

ಆಗ ಆತ ನಾನಾ ಛಂದದಲ್ಲಿ ಅದ್ಭುತ ಪಾಂಡಿತ್ಯ ಪ್ರಕಾಶಪಡಿಸಿ ವೇದ ವೇದಾಂತ ಆಗಮ ನಿಗಮಗಳಿಂದ ವಿಶ್ವಸೃಷ್ಟಿಯಲ್ಲಿ ವಾಕ್ಯವೇ ಸರ್ವಶ್ರೇಷ್ಠ, ವಾಕ್ಯವೇ ಸತ್ಯ, ವಾಕ್ಯವೇ ಬ್ರಹ್ಮ ಎಂದು ಪ್ರಮಾಣಪಡಿಸತೊಡಗಿದನು. ಬ್ರಹ್ಮ, ವಿಷ್ಣು, ಮಹೇಶ್ವರರು ವಾಕ್ಯದ ವಶ ಅದರಿಂದ ವಾಕ್ಯ ಅವರಿಗಿಂತ ಶ್ರೇಷ್ಠ. ಬ್ರಹ್ಮ ನಾಲ್ಕು ಮುಖಗಳಿಂದಲೂ ವಾಕ್ಯವನ್ನು ಮುಗಿಸಲಾರದಿರುವನು ಪಂಚಾನನ ಐದು ಮುಖಗಳಿಂದಲೂ ವಾಕ್ಯ ಕೊನೆಗಾಣಿಸಲಾರದೆ ಕೊನೆಗೆ ನೀರವವಾಗಿ ಧ್ಯಾನದಲ್ಲಿ ಮುಳುಗಿ ವಾಕ್ಯ ಹುಡುಕುತಿರುವನು ಎಂದನು.

ಈ ರೀತಿಯಲ್ಲಿ ಪಾಂಡಿತ್ಯದಮೇಲೆ ಪಾಂಡಿತ್ಯ ಮತ್ತು ಶಾಸ್ತ್ರದಮೇಲೆ ಶಾಸ್ತ್ರ ಹೇರಿ ವಾಕ್ಯಕ್ಕಾಗಿ ಅಭ್ರಭೇಧೀ ಸಿಂಹಾಸನ ಒಂದನ್ನು ನಿರ್ಮಿಸಿ, ವಾಕ್ಯವನ್ನು ಮರ್ತ್ಯಲೋಕ ಮತ್ತು ದೇವಲೋಕದ ಮಸ್ತಕದಮೇಲೆ ಕೂರಿಸಿಬಿಟ್ಟನು. ಅನಂತರ ಪುನಃ ಗುಡುಗಿನ ದನಿಯಲ್ಲಿ "ವಾಕ್ಯಕ್ಕಿಂತ ಶ್ರೇಷ್ಠ ಯಾವುದು" ಎಂದು ಕೇಳಿದನು.

ದರ್ಪದೊಡನೆ ನಾಲ್ಕು ಕಡೆಯೂ ನೋಡಿದನು. ಯಾರೂ ಯಾವ ಉತ್ತರವನ್ನೂ ಕೊಡದೆ ಹೋಗಲು ಆಗ ಆಸನ ಗ್ರಹಣಮಾಡಿದನು.

ಪಂಡಿತ ಮಂಡಳಿ "ಸಾಧು, ಸಾಧು ಧನ್ಯ ಧನ್ಯ" ಎಂದು ಹೇಳತೊಡಗಿತು. ರಾಜ ವಿಸ್ಮಿತನಾಗಿದ್ದನು. ಕವಿ ಶೇಖರ ಈ ವಿಪುಲ ಪಾಂಡಿತ್ಯದ ಇದಿರಿನಲ್ಲಿ ತಾನು ಕ್ಷುದ್ರನೆಂದು ಅಂದುಕೊಂಡನು. ಅಂದಿನಮಟ್ಟಿಗೆ ಸಭೆ ಮುಗಿಯಿತು.

೩

ಮೂರನೆಯ ದಿನ ಶೇಖರ ಬಂದು ಹಾಡಲು ಆರಂಭಿಸಿದನು. ವೃಂದಾವನದಲ್ಲಿ ಮೊದಲು ಕೊಳಲು ನಾದ ಕೇಳಿಸಿತು. ಯಾರು ಊದಿದರೆಂಬುದನ್ನು, ಎಲ್ಲಿ ಊದುತಿದೆಯೆಂಬುದನ್ನು ಗೋಪಿಯರು ಇನ್ನೂ ಅರಿಯರು. ಒಮ್ಮೆ ದಕ್ಷಿಣದ ಗಾಳಿಯಿಂದ ದನಿ ಬರುವಂತೆ ತೋರಿತು. ಮತ್ತೊಮ್ಮೆ ಉತ್ತರ ದಿಕ್ಕಿನಿಂದ ಗೋವರ್ಧನಗಿರಿಯ ಶಿಖರದಿಂದ ಬರುವಂತೆ ತೋರಿತು. ಉದಯಾಚಲದ ಶಿಖರದಲ್ಲಿ ಯಾರೋ ನಿಂತು ಮಿಲನಕ್ಕಾಗಿ ಕರೆಯುತಿರುವರೆಂದು ಎನಿಸಿತು. ಅಸ್ತಾಚಲದಲ್ಲಿ ಕುಳಿತು ಯಾರೋ ವಿರಹ ಶೋಕದಿಂದ ಅಳುತಿರುವಂತೆ ತೋರಿತು. ಯಮುನೆಯ ಪ್ರತಿಯೊಂದು ಅಲೆಯಿಂದ ಕೊಳಲ ನಾದ ಹೊರಟಂತೆ ಮನಸ್ಸಿಗೆ ಅರಿವಾಯಿತು. ಆಕಾಶದ ಪ್ರತಿಯೊಂದು ನಕ್ಷತ್ರ ಆ ಕೊಳಲ ರಂಧ್ರವೋ ಎಂದು ತೋರಿತು. ಕೊನೆಗೆ ಕುಂಜ ಕುಂಜದಲ್ಲಿ, ಹಾದಿ ಬೀದಿಯಲ್ಲಿ, ಈ ಪುಷ್ಪ ಪುಷ್ಪಗಳಲ್ಲಿ, ನೀರಿನಲ್ಲಿ ನೆಲದಮೇಲೆ, ಮೇಲೆ ಕೆಳಗೆ ಒಳಗೆ ಹೊರಗೆ ಎಲ್ಲೆಡೆಯಲ್ಲೂ ಕೊಳಲು ಬಾಜಿಸಲಾರಂಭಿಸಿತು— ಕೊಳಲು ಏನು ಹೇಳುತಿದೆ ಎಂಬುದನ್ನು ಯಾರೂ ಅರಿಯಲಾರದಿದ್ದರು. ಕೊಳಲ ದನಿಗೆ ಉತ್ತರವಾಗಿ ಹೃದಯ ಏನು ಹೇಳಬಯಸುವುದು. ಅದನ್ನು ಯಾರೂ ನಿರ್ಧರಿಸಿ ಹೇಳಲಾರದೆ ಹೋದರು. ಕೇವಲ ಎರಡು ಕಣ್ಣುಗಳಲ್ಲೂ ಕಣ್ಣೀರು ಉಕ್ಕಿ ಹರಿಯಿತು. ನೋಡಲು ಸುಂದರವಾದ ಶ್ಯಾಮಸ್ನಿಗ್ಧ ಮರಣದ ಆಕಾಂಕ್ಷೆಯಿಂದ ಇಡೀ ಜೀವ ಉತ್ಕಂಠಿತವಾಯಿತು.

ಸಭೆ ಮರೆತು, ರಾಜನನ್ನು ಮರೆತು, ತನ್ನ ಪಕ್ಷ ಪ್ರತಿಪಕ್ಷ ಮರೆತು, ಯಶ ಅಪಯಶ, ಜಯ ಪರಾಜಯ, ಉತ್ತರ ಪ್ರತ್ಯುತ್ತರ ಎಲ್ಲವನ್ನೂ ಮರೆತು, ಶೇಖರ ತನ್ನ ನಿರ್ಜನ ಹೃದಯಕುಂಜದ ನಡುವೆ ಒಂಟಿಯಾಗಿ ಇರುವಂತೆ ನಿಂತು ಈ ವೇಣುಗಾನ ಹಾಡುತ್ತ ಹೋದನು. ಕೇವಲ ಜ್ಯೋತಿರ್ಮಯೀ ಮಾನಸೀ ಮೂರ್ತಿಯೊಂದು ನೆನಪಿತ್ತು. ಕಿವಿಯಲ್ಲಿ ಕಮಲ

ದಂತಹ ಚರಣಗಳೆರಡರ ಗೆಜ್ಜೆಯ ಸದ್ದು ಕಿವಿಯಲ್ಲಿ ಬಾಜಿಸುತಿತ್ತು. ಕವಿ ಹಾಡನ್ನು ಮುಗಿಸಿ ಜ್ಞಾನ ತಪ್ಪಿದವನಂತೆ ಕುಳಿತುಕೊಂಡನು. ಆಗ ಅನಿರ್ವಚನೀಯ ಮಾಧುರ್ಯದಿಂದ ಅಗಾಧವಾಗಿ ವ್ಯಾಪಿಸಿದ್ದ ವಿರಹ ವ್ಯಾಕುಲತೆಯಿಂದ ಸಭಾಗೃಹ ಪರಿಪೂರ್ಣವಾಯಿತು, ಯಾರೂ ಹೊಗಳಿಕೆಯ ಮಾತು ಆಡಲು ಶಕ್ತರಾಗಲಿಲ್ಲ

ಭಾವದ ಪ್ರಬಲತೆ ಸ್ವಲ್ಪ ಅಡಗಿದ ಅನಂತರ ಪುಂಡರೀಕ ಸಿಂಹಾಸನದ ಇದಿರಿನಲ್ಲಿ ಬಂದು ನಿಂತನು. "ರಾಧೆಯಾದರೂ ಯಾರು, ಕೃಷ್ಣ ಯಾರು" ಎಂದು ಪ್ರಶ್ನಿಸಿದನು. ಪ್ರಶ್ನಿಸಿ ನಾಲ್ಕು ದಿಕ್ಕಿನಲ್ಲೂ ದೃಷ್ಟಿ ಬೀರಿ ಶಿಷ್ಯರ ಕಡೆಗೆ ನೋಡಿ ನಸುನಕ್ಕು ಮತ್ತೊಮ್ಮೆ "ರಾಧೆ ಯಾರು, ಕೃಷ್ಣನಾದರೂ ಯಾರು" ಎಂದು ಪ್ರಶ್ನಿಸಿ ಅಸಾಮಾನ್ಯ ಪಾಂಡಿತ್ಯ ಪ್ರದರ್ಶಿಸಿ ತಾನೇ ಅದಕ್ಕೆ ಉತ್ತರ ಕೊಡಲು ಆರಂಭಿಸಿದನು.

"ರಾಧೆ ಪ್ರಣವ ಓಂಕಾರ ಕೃಷ್ಣ ಧ್ಯಾನಯೋಗ ಮತ್ತು ವೃಂದಾವನ ಎರಡು ಹುಬ್ಬುಗಳ ನಡುವಣ ಬಿಂದು" ಎಂದನು. ಇಡಾ, ಸುಷುಮ್ನಾ, ಪಿಂಗಳಾ, ನಾಭಿಪದ್ಮ, ಹೃತ್ಪದ್ಮ, ಬ್ರಹ್ಮರಂಧ್ರ ಎಲ್ಲವನ್ನೂ ತಂದುಬಿಟ್ಟನು. "ರಾ"ದ ಅರ್ಥವಾದರೂ ಏನು. "ಧಾ"ದ ಅರ್ಥ ತಾನೆ ಏನು ಕೃಷ್ಣ ಎಂಬ ಶಬ್ದದಲ್ಲಿ "ಕ" ಅಕ್ಷರದಿಂದ ಮೂರ್ಧನ್ಯ "ಣಾ" ಪರ್ಯಂತ ಪ್ರತಿಯೊಂದು ಅಕ್ಷರಕ್ಕೆ ಎಷ್ಟು ಬಗೆಯ ಭಿನ್ನ ಭಿನ್ನ ಅರ್ಥ ಇರಲು ಸಾಧ್ಯ ಅವುಗಳು ಒಂದೊಂದರ ಮೀಮಾಂಸೆ ಮಾಡಿದನು. ಒಮ್ಮೆ ಕೃಷ್ಣ ಯಜ್ಞ "ರಾಧೆ" "ಅಗ್ನಿ" ಎಂದು ತಿಳಿಸಿದನು. ಒಮ್ಮೆ ಕೃಷ್ಣ ವೇದ ಮತ್ತು ರಾಧಿಕೆ ಷಡ್ದರ್ಶನ ಎಂದನು ಅನಂತರ ಕೃಷ್ಣ ಶಿಕ್ಷೆ ಮತ್ತು ರಾಧೆ ದೀಕ್ಷೆ ಎಂದನು. ರಾಧೆ ತರ್ಕ, ಕೃಷ್ಣ ಮೀಮಾಂಸೆ, ರಾಧೆ ಉತ್ತರ ಪ್ರತ್ಯುತ್ತರ, ಕೃಷ್ಣ ಜಯ ಲಾಭ ಎಂದನು.

ಹೀಗೆ ಹೇಳಿ ರಾಜನ ಕಡೆ, ಪಂಡಿತರ ಕಡೆ ಕೊನೆಗೆ ತೀವ್ರ ಹಾಸ್ಯದೊಡನೆ ಶೇಖರನ ಕಡೆಗೆ ನೋಡಿ ಪುಂಡರೀಕ ಕುಳಿತನು.

ರಾಜ ಪುಂಡರೀಕನ ಅಸಾಧ್ಯ ಸಾಮರ್ಥ್ಯದಿಂದ ಮುಗ್ಧನಾಗಿಹೋದನು. ಪಂಡಿತರ ವಿಸ್ಮಯಕ್ಕೆ ಎಲ್ಲೆಯೇ ಇರಲಿಲ್ಲ ಕೃಷ್ಣ ರಾಧೆಯರ ಹೊಸ ಹೊಸ ವ್ಯಾಖ್ಯೆಯಲ್ಲಿ ಕೊಳಲ ಸಂಗೀತ. ಯಮುನೆಯ ಕಲ್ಲೋಲ ಪ್ರೇಮದ ಮೋಹ ಎಲ್ಲ ಒಮ್ಮೆಗೇ ದೂರ ಸರಿದುವು. ಪ್ರಪಂಚದ ಮೇಲಿನಿಂದ ಯಾರೋ ಒಬ

ವ್ಯಕ್ತಿ ವಸಂತದ ಹಸುರು ವರ್ಣವನ್ನು ಅಳಿಸಿಬಿಟ್ಟು ಮೊದಲಿನಿಂದ ಕಡೆಯ ವರೆಗೆ ಪವಿತ್ರ ಗೋಮಯವನ್ನು ಲೇಪಿಸಿ ಹೋದಂತೆ ತೋರಿತು. ಶೇಖರ ತನ್ನ ಇಷ್ಟು ದಿನಗಳ ಇಷ್ಟೊಂದು ಕೀರ್ತನೆ ವ್ಯರ್ಥವೆಂದು ಅಂದುಕೊಳ್ಳ ತೊಡಗಿದನು. ಅನಂತರ ಅವನಿಗೆ ಮತ್ತೆ ಹಾಡುವ ಶಕ್ತಿಯಿರಲಿಲ್ಲ. ಅಂದು ಸಭೆ ಭಂಗವಾಯಿತು.

೪

ಮರುದಿನ ಪುಂಡರೀಕ ವ್ಯಸ್ತ ಮತ್ತು ಸಮಸ್ತ, ದ್ವಿವ್ಯಸ್ತ ಮತ್ತು ದ್ವಿಸಮಸ್ತಕ, ವೃತ್ತ, ತಾರ್ಕ್ಯ, ಸೌತ್ರ, ಚಕ್ರ, ಪದ್ಮ, ಕಾಕಪದ ಆದ್ಯುತ್ತರ, ಮಧ್ಯೋತ್ತರ, ಅಂತ್ಯೋತ್ತರ, ವಾಕ್ಯೋತ್ತರ, ವಚನಗುಪ್ತ, ಮಾತ್ರಾ ಚ್ಯುತಕ, ಚ್ಯುತ ದತ್ತಾಕ್ಷರ, ಅರ್ಥಗೂಢ, ಸ್ತುತಿ ನಿಂದೆ, ಅಪಹ್ನುತಿ ಶ್ರದ್ಧಾ ಪಭ್ರಂಶ, ಶಾಬ್ದೀ, ಕಾಲಸಾರ, ಪ್ರಹೇಲಿಕೆ, ಮೊದಲಾದ ಅದ್ಭುತ ಶಬ್ದ ಚಾತುರ್ಯ ತೋರಿಸಿಕೊಟ್ಟನು. ಕೇಳಿ ಸಭೆ ಆದ್ಯಂತವೂ ಜನರು ವಿಸ್ಮಯ ಅಡಗಿಸಲು ಎಡೆಕಾಣದೆ ಹೋದರು.

ಶೇಖರ ರಚಿಸುತ್ತಿದ್ದ ಪದಗಳೆಲ್ಲ ಅತ್ಯಂತ ಸರಳವಾದುವು. ಅವು ಸುಖ ದಲ್ಲಿ, ದುಃಖದಲ್ಲಿ, ಉತ್ಸವದಲ್ಲಿ, ಆನಂದದಲ್ಲಿ, ಸರ್ವಸಾಮಾನ್ಯವಾಗಿ ವ್ಯವ ಹಾರದಲ್ಲಿದ್ದುವು—ಇಂದು ಅದರಿಂದ ಏನೇನೂ ಉಪಯೋಗ ಇಲ್ಲವೆಂದೂ, ಮನಸ್ಸಾದರೆ ತಾವೂ ರಚಿಸಬಲ್ಲೆವು, ಕೇವಲ ಅಭ್ಯಾಸವಿಲ್ಲದಿರುವಿಕೆ, ಅನಿಚ್ಛೆ, ಅವಕಾಶವಿಲ್ಲದುದು, ಇತ್ಯಾದಿ ಕಾರಣಗಳಿಂದಲೇ ಸಾಧ್ಯವಿಲ್ಲದಿರುವರು ಎಂದೂ ಅಂದರು. ಮಾತುಗಳು ಅಷ್ಟು ಹೊಸವೇನೂ ಇಲ್ಲ, ದುರೂಹವಲ್ಲ, ಅವು ಗಳಲ್ಲಿ ಪ್ರಪಂಚದ ಜನರಿಗೆ ಹೊಸದೊಂದು ಉಪದೇಶವೂ ಇಲ್ಲ, ಅನುಕೂಲವೂ ಇಲ್ಲ—ಆದರೆ ಇಂದು ತಾವು ಕೇಳಿದ್ದು ಅದ್ಭುತ ಸಂಗತಿಗಳು. ನೆನ್ನೆ ಕೇಳಿದ್ದೆ ವಲ್ಲ ಅವುಗಳಲ್ಲೂ ವಿಶಾಲವಾಗಿ ಆಲೋಚಿಸಬೇಕಾದ ಮತ್ತು ಅರಿಯಬೇಕಾದ ವಿಷಯಗಳಿದ್ದುವು. ಪುಂಡರೀಕನ ಪಾಂಡಿತ್ಯ ಮತ್ತು ನಿಪುಣತೆಯ ಇದಿರಿನಲ್ಲಿ ಅವರಿಗೆ ತಮ್ಮ ಕವಿ ಸಂಪೂರ್ಣ ಎಳೆಯ ಹುಡುಗ ಮತ್ತು ಸಾಮಾನ್ಯ ವ್ಯಕ್ತಿ ಎಂದು ತೋರತೊಡಗಿತು.

ಮೀನಿನ ಬಾಲದ ಅಲುಗುವಿಕೆಯಿಂದ ನೀರಿನಲ್ಲಿ ಉಂಟಾಗುವ ಗೂಢ

ವಾದ ಚಾಂಚಲ್ಯದ ಆಘಾತವನ್ನು ಸರೋವರದ ಪದ್ಮ ಹೇಗೆ ಪ್ರತಿಯೊಂದು ಅರಿಯಬಲ್ಲುದೋ ಹಾಗೆಯೇ ಶೇಖರ ತನ್ನ ನಾಲ್ಕು ದಿಕ್ಕಿನಲ್ಲೂ ಸಭೆಯಲ್ಲಿ ಜನರ ಮನಸ್ಸಿನ ಭಾವವನ್ನು ಹೃದಯದಲ್ಲಿ ಅರಿಯಬಲ್ಲವನಾದನು.

ಇಂದು ಕೊನೆಯ ದಿನ. ಇಂದು ಜಯ ಪರಾಜಯದ ನಿರ್ಣಯವಾಗುವುದು. ರಾಜ ತನ್ನ ಕವಿಯ ಕಡೆಗೆ ದೃಷ್ಟಿ ಬೀರಿದನು. ಅದರ ಅರ್ಥ ಇಷ್ಟೆ. ಇಂದು ನಿರುತ್ತರನಾಗಿದ್ದರೆ ನಡೆಯದು—ನಿನ್ನಿಂದ ಸಾಧ್ಯವಾದಷ್ಟು ಪ್ರಯತ್ನ ಪಡಬೇಕು.

ಶೇಖರ ಅರುಗಿನಲ್ಲಿ ಎದ್ದು ನಿಂತನು. ಈ ಕೆಲವು ಮಾತುಗಳನ್ನು ಮಾತ್ರವೇ ಆಡಿದನು "ವೀಣಾಪಾಣೀ ಶ್ವೇತಭುಜೆ, ನೀನು ನಿನ್ನ ಕಮಲವನವನ್ನು ಬರಿದುಮಾಡಿ ಇಂದು ಮಲ್ಲಭೂಮಿಯಲ್ಲಿ ಬಂದು ನಿಂತೆಯಾದರೆ ಆಗ ನಿನ್ನ ಚರಣಾಸಕ್ತ ಅಮೃತ ಪಿಪಾಸೀ ಭಕ್ತರಿರುವರಲ್ಲ ಅವರ ಗತಿಯೇನು" ಎಂದು ಶ್ವೇತಭುಜೆ ವೀಣಾಪಾಣಿ ನತನಯನೆಯಾಗಿ ರಾಜಾಂತಃಪುರದ ಗವಾಕ್ಷದ ಇದಿರಿನಲ್ಲಿ ನಿಂತುಕೊಂಡಿರುವಂತೆ ಮುಖವನ್ನು ಸ್ವಲ್ಪ ಎತ್ತಿಕೊಂಡು ಕರುಣಾಸ್ವರದಲ್ಲಿ ಹೇಳಿದನು.

ಈಗ ಪುಂಡರೀಕ ಬಲವಾಗಿ ನಗಲಾರಂಭಿಸಿದನು. "ಶೇಖರ" ಶಬ್ದದ ಕೊನೆಯ ಎರಡಕ್ಷರಗಳನ್ನು ಎತ್ತಿಕೊಂಡು ಲೆಕ್ಕವಿಲ್ಲದಷ್ಟು ಶ್ಲೋಕಗಳನ್ನು ರಚಿಸುತ್ತ ಹೋದನು "ಪದ್ಮವನದೊಡನೆ ಖರದ ಸಂಬಂಧವೇನು" ಎಂದನು. ಸಂಗೀತದಲ್ಲಿ ವಿಸ್ತಾರ ಚರ್ಚೆಯಿದ್ದರೂ ಆ ಪ್ರಾಣಿಗೆ ಏನು ಪ್ರಯೋಜನವಾಗಿದೆ. ಮೇಲಾಗಿ ಸರಸ್ವತಿಯ ಆಸನ ಪುಂಡರೀಕವೇ ಅಲ್ಲವೇ. ಮಹಾರಾಜರ ಆಳ್ವಿಕೆಯಲ್ಲಿ ಆಕೆ ಯಾವ ತಪ್ಪು ಮಾಡಿದ್ದಳು. ಈ ದೇಶದಲ್ಲಿ ಆಕೆಯನ್ನು ಖರವಾಹನೆಯಾಗಿ ಮಾಡಿ ಅವಮಾನಗೊಳಿಸುವುದೇಕೆ—ಎಂದನು.

ಪಂಡಿತರು ಈ ಪ್ರತ್ಯುತ್ತರ ಕೇಳಿ ಗಟ್ಟಿಯಾಗಿ ನಗಲಾರಂಭಿಸಿದರು. ಸಭಾಸದರೂ ಅದರಲ್ಲಿ ಜೊತೆಯಾದರು—ಅವರ ಇದಿರಿನಲ್ಲೇ ಸಭೆ ಆದ್ಯಂತವೂ ತಿಳಿದುಕೊಂಡವರು ತಿಳಿದುಕೊಳ್ಳದವರು—ಎಲ್ಲರೂ ನಗಲಾರಂಭಿಸಿದರು.

ಇದಕ್ಕೆ ತಕ್ಕ ಪ್ರತ್ಯುತ್ತರದ ಆಶೆಯಿಂದ ರಾಜ ತನ್ನ ಕವಿ ಮಿತ್ರನನ್ನು ಪುನಃಪುನಃ ಅಂಕುಶದಂತಹ ತೀಕ್ಷ್ಣ ದೃಷ್ಟಿಯ ಮೂಲಕ ಚುಚ್ಚತೊಡಗಿದನು.

ಆದರೆ ಶೇಖರ ಅತ್ತ ಕಡೆ ಏನೇನೂ ಲಕ್ಷ್ಯಕೊಡದೆ ನಿಶ್ಚಲ ಭಾವದಿಂದ ಕುಳಿತಿದ್ದನು.

ಆಗ ಶೇಖರನ ವಿಷಯದಲ್ಲಿ ಮನಸ್ಸಿನಲ್ಲೇ ಅತ್ಯಂತ ಕೋಪಗೊಂಡು ಸಿಂಹಾಸನದಿಂದ ಇಳಿದುಬಂದನು—ತನ್ನ ಕೊರಳಿನಿಂದ ಮುತ್ತಿನ ಮಾಲೆ ತೆಗೆದು ಪುಂಡರೀಕನ ಕೊರಳಲ್ಲಿ ಹಾಕಿದನು—ಸಭೆಯಲ್ಲಿದ್ದವರೆಲ್ಲ ಹೊಗಳಿದರು. ಅಂತಃಪುರದಿಂದ ಒಂದೇ ಸಮಯದಲ್ಲಿ ಹಲವು ಬಳೆಗಳ ಸದ್ದು ಗೆಜ್ಜೆಗಳ ದನಿ ಕೇಳಿಸಿತು—ಅದನ್ನೇ ಕೇಳಿ ಶೇಖರ ಆಸನ ಬಿಟ್ಟು ಎದ್ದು ಮೆಲ್ಲಮೆಲ್ಲನೆ ಸಭಾಗೃಹದಿಂದ ಹೊರಬಿದ್ದನು.

೫

ಕೃಷ್ಣ ಚತುರ್ದಶಿಯ ರಾತ್ರಿ. ಗಾಢಾಂಧಕಾರ. ಹೂವಿನ ಸುಗಂಧ ಹರಡುತ್ತ ತೆಂಕಣ ಗಾಳಿ ಉದಾರ ವಿಶ್ವಬಂಧುವಿನಂತೆ ತೆರೆದ ಗವಾಕ್ಷದಿಂದ ನಗರದ ಮನೆ ಮನೆಯಲ್ಲಿ ಪ್ರವೇಶಿಸುತಿತ್ತು.

ಮನೆಯ ಹಲಗೆಯ ಮಂಚದ ಮೇಲಿಂದ ಶೇಖರ ತನ್ನ ಪುಸ್ತಕಗಳನ್ನು ಎತ್ತಿ ಇದಿರಿನಲ್ಲಿ ರಾಶಿ ಹಾಕಿದನು. ಅದರ ಮಧ್ಯದಿಂದ ಆರಿಸಿ ಆರಿಸಿ ತನ್ನ ಸ್ವಂತ ರಚನೆಯ ಗ್ರಂಥಗಳನ್ನು ಬೇರೆ ಮಾಡಿದನು ಬಹಳ ದಿನಗಳ ಅಪಾರ ಬರಹ. ಅವುಗಳಲ್ಲಿ ಹಲವು ರಚನೆಗಳನ್ನು ಆತ ಸ್ವತಃ ಮರೆತೇ ಹೋಗಿದ್ದನು. ಅವನ್ನು ತಿರುವಿ ಮಗುಚಿ ಅಲ್ಲಿ ಇಲ್ಲಿ ಓದಿ ನೋಡಲು ತೊಡಗಿದನು. ಇಂದು ಅವನ ಬಳಿ ಇವೆಲ್ಲ ಉಪಯೋಗವಿಲ್ಲದವು ಎಂದು ಅನಿಸಿದವು.

ನಿಟ್ಟುಸಿರುಬಿಟ್ಟು "ಸಂಪೂರ್ಣ ಜೀವನದ ಸಂಚಯ ಇಷ್ಟೇಯೇನು, ಕೆಲವು ಮಾತುಗಳು, ಛಂದಸ್ಸು ಮತ್ತು ಪ್ರಾಸಗಳು" ಎಂದು ಅಂದುಕೊಂಡನು. ಇವುಗಳಲ್ಲಿ ಯಾವುದೇ ಬಗೆಯ ಸೌಂದರ್ಯ, ಮಾನವರ ಯಾವುದೇ ಬಗೆಯ ಆನಂದ, ಯಾವುದೇ ವಿಶ್ವಸಂಗೀತದ ಪ್ರತಿಧ್ವನಿ, ತನ್ನ ಹೃದಯದ ಗಭೀರ ಆತ್ಮಪ್ರಕಾಶ ಇವು ಯಾವುದಾದರೂ ಅಡಗಿದೆಯೆಂಬುದು ಇಂದು ಅವನಿಗೆ ಕಾಣಿಸಲಿಲ್ಲ. ರೋಗಿಯ ಬಾಯಿಗೆ ಯಾವ ತಿನಸೂ ರುಚಿಸದಂತೆ ಅವನು ಇಂದು ತನ್ನ ಕೈಗೆ ಸಿಕ್ಕಿದುದೆಲ್ಲವನ್ನೂ ತಳ್ಳಿಹಾಕಿಬಿಟ್ಟನು. ರಾಜನ ಮೈತ್ರಿ,

**ಪ್ರಜೆಗಳ ಖ್ಯಾತಿ, ಹೃದಯದ ಹಿರಿಯಾಸೆ, ಕಲ್ಪನೆಯ ಕುಹಕ—**
ಕತ್ತಲೆಯ ರಾತ್ರಿಯಲ್ಲಿ ಎಲ್ಲವೂ ಶೂನ್ಯ ವಿಡಂಬನೆಯೆಂದು ಮನಸ್ಸಿಗೆ ಅನಿ
ಆಗ ಒಂದೊಂದಾಗಿ ತನ್ನ ಪುಸ್ತಕಗಳನ್ನು ಹರಿದು ಇದಿರಿನಲ್ಲಿ ಉ
ತಿದ್ದ ಅಗ್ನಿಭಾಂಡದಲ್ಲಿ ಎಸೆಯಲಾರಂಭಿಸಿದನು. ಹಠಾತ್ತಾಗಿ ಒಂದು ಹ
ಸಂಗತಿ ನೆನಪಾಯಿತು. ನಗುತ್ತ ನಗುತ್ತ—ದೊಡ್ಡ ದೊಡ್ಡ ರಾಜರ
ಅಶ್ವಮೇಧ ಯಜ್ಞ ಮಾಡಿರುವರು ಇಂದು ಇದು ನಾನು ಮಾಡುವ ಕಾವ್ಯ
ಯಜ್ಞ ಎಂದು ಅಂದುಕೊಂಡನು ಆದರೆ ತಕ್ಷಣ ಹೋಲಿಕೆ ಸರಿಯಾಗಿಲ್ಲ
ಆಷ್ಟೇ ಮನಸ್ಸಿಗೆ ತೋರಿತು ಅಶ್ವಮೇಧದ ಕುದುರೆ ಎಲ್ಲೆಡೆಯಲ್ಲೂ ವಿ
ಯಾಗಿ ಬರುವುದು—ಆಗ ಅಶ್ವಮೇಧವಾಗುವುದು. ನನ್ನ ಕವಿತ್ವ ಪ
ವಾಗಿರುವಾಗ ನಾನು ಕಾವ್ಯಮೇಧ ಮಾಡಲು ಹೊರಟಿರುವೆ ಇನ್ನೂ
ದಿನಗಳ ಮುಂಚೆಯೇ ಮಾಡಿದ್ದರೆ ಚೆನ್ನಾಗಿರುತಿತ್ತು ಎಂದು ಅಂದುಕೊಂ
ಒಂದೊಂದಾಗಿ ತನ್ನ ಎಲ್ಲ ಗ್ರಂಥಗಳನ್ನೂ ಅಗ್ನಿಯಲ್ಲಿ ಸಮರ್ಪಿಸಿ
ಬೆಂಕಿ ಧೋ ಧೋ ಎಂದು ಕಿಚ್ಚೆದ್ದಿತು. ಕವಿ ವೇಗವಾಗಿ ತನ್ನೆರಡು
ಗಳನ್ನು ಆಕಾಶದತ್ತ ನೀಡಿ "ನಿನಗೆ ಕೊಟ್ಟೆ, ನಿನಗೆ ಕೊಟ್ಟೆ, ನಿನಗೆ ಕೊ
ಓ ಸುಂದರೀ ಅಗ್ನಿಶಿಖೆ, ನಿನಗೇ ಕೊಟ್ಟೆನು—ಇಷ್ಟು ದಿನಗಳೂ ನಿನಗೆ
ವನ್ನೂ ಆಹುತಿ ಕೊಡುತ್ತ ಬಂದೆ, ಇಂದು ಒಮ್ಮೆಗೇ ನಿಶ್ಶೇಷವಾಗಿ ಕೊಟ್ಟೆ
ಬಹು ದಿನಗಳು ನೀನು ನನ್ನ ಹೃದಯದಲ್ಲಿ ಜ್ವಲಿಸುತಿದ್ದೆ. ಓ ಮೋ
ವಿಶ್ವರೂಪಿಣೀ, ಒಂದು ಸಮಯ ಚೆನ್ನವಾಗಿದ್ದೆನಾದರೆ ಭಂಗಾರವಾಗುತಿ
ಆದರೆ ನಾನು ತುಚ್ಛ, ತೃಣ, ದೇವಿ. ಆದ್ದರಿಂದ ಇಂದು ನಾನು ಭಸ್ಮ
ಹೋಗಿರುವೆ" ಎಂದನು.

ರಾತ್ರಿ ಬಹಳ ಹೊತ್ತಾಯಿತು. ಶೇಖರ ತನ್ನ ಕೋಣೆಯ ಎಲ್ಲ
ಗಳನ್ನೂ ತೆರೆದನು. ತಾನು ಯಾವ್ಯಾವ ಹೂಗಳನ್ನು ಪ್ರೀತಿಸುತ್ತಿದ್ದ
ಅವೆಲ್ಲವನ್ನೂ ಸಂಜೆ ತೋಟದಿಂದ ಸಂಗ್ರಹಿಸಿ ತಂದಿದ್ದನು. ಎಲ್ಲವೂ ಬಿ
ಬಣ್ಣದ ಹೂವುಗಳು. ಮಲ್ಲೆ ಮಲ್ಲಿಗೆ, ಸುಗಂಧರಾಜ ಅವುಗಳನ್ನು
ಹಿಡಿಯಾಗಿ ಎತ್ತಿಕೊಂಡು ಹಾಸಿಗೆಯಮೇಲೆ ಹರಡಿದನು. ಕೊಟ
ನಾಲ್ಕು ಮೂಲೆಗಳಲ್ಲೂ ದೀಪಗಳನ್ನು ಹಚ್ಚಿದನು.

ಆನಂತರ ಮಧುವಿನೊಡನೆ ಸಸ್ಯಸಂಬಂಧವಾದ ವಿಷವೊಂದನ್ನು ನಿ

ಮುಖದೊಡನೆ ಪಾನಮಾಡಿದನು—ಮೆಲ್ಲಮೆಲ್ಲನೆ ತನ್ನ ಹಾಸಿಗೆಗೆ ಹೋಗಿ ಮಲಗಿಕೊಂಡನು. ಮೈ ಸೊಕ್ಕಿತು. ಕಣ್ಣು ಮುಚ್ಚಿಕೊಂಡಿತು.

ನೂಪುರದ ದನಿ ಕೇಳಿತು ತೆಂಕಣ ಗಾಳಿಯೊಡನೆ ಜಡೆಯ ಸುಗಂಧವೊಂದು ಕೋಣೆಯಲ್ಲಿ ಪ್ರವೇಶಿಸಿತು.

ಕವಿ ಬಿಡುಗಣ್ಣಿನೊಡನೆ "ದೇವೀ, ಭಕ್ತನಮೇಲೆ ದಯೆ ತೋರಿದೆಯೇನು, ಇಷ್ಟು ದಿನಗಳ ಅನಂತರ ಇಂದು ಕಾಣಿಸಿಕೊಂಡೆಯೇನು" ಎಂದನು

"ಕವೀ, ಬಂದಿರುವೆನು" ಎಂದು ಸುಮಧುರ ಕಂಠವೊಂದರಲ್ಲಿ ಉತ್ತರ ಕೇಳಿಸಿತು

ಶೇಖರ ಬೆಚ್ಚಿ ಕಣ್ಣು ಹೊರಳಿಸಿದನು—ಹಾಸಿಗೆಯ ಇದಿರಿನಲ್ಲಿ ಅಪೂರ್ವ ರಮಣೀಮೂರ್ತಿಯೊಂದನ್ನು ಕಂಡನು

ಮೃತ್ಯು ಆವರಿಸಿ ನೀರು ತುಂಬಿದ್ದ ಕಣ್ಣುಗಳಿಂದ ಸ್ಪಷ್ಟವಾಗಿ ನೋಡಲಾಗಲಿಲ್ಲ ತನ್ನ ಹೃದಯದ ಆ ಛಾಯಾಮಯಿ ಪ್ರತಿಮೆ ಒಳಗಿನಿಂದ ಹೊರಬಂದು ಮರಣಕಾಲದಲ್ಲಿ ತನ್ನ ಮುಖದ ಕಡೆ ಸ್ಥಿರ ದೃಷ್ಟಿಯಿಂದ ನೋಡುತಿರುವಂತೆ ಮನಸ್ಸಿಗೆ ತೋರಿತು

ರಮಣಿ—"ನಾನು ರಾಜಕನ್ಯೆ ಅಪರಾಜಿತೆ" ಎಂದಳು

ಕವಿ ಬಹು ಪ್ರಯತ್ನದೊಡನೆ ಎದ್ದು ಕುಳಿತನು.

ರಾಜಕನ್ಯೆ ಹೀಗೆಂದಳು:—"ರಾಜ, ನಿನ್ನ ವಿಷಯದಲ್ಲಿ ನ್ಯಾಯ ತೋರಲಿಲ್ಲ ನಿನಗೆ ಜಯವಾಯಿತು. ಕವೀ, ಅದಕ್ಕೆ ನಾನು ಇಂದು ನಿನಗೆ ಜಯಮಾಲೆ ಒಪ್ಪಿಸಲು ಬಂದಿರುವೆನು." ಹೀಗೆ ಹೇಳಿ ಅಪರಾಜಿತೆ ತನ್ನ ಕೊರಳಿನಿಂದ ತನ್ನ ಕೈಯಾರ ಕಟ್ಟಿದ್ದ ಹೂಮಾಲಿಕೆಯನ್ನು ಕಳಚಿ ಕವಿಯ ಕೊರಳಲ್ಲಿ ಹಾಕಿದಳು. ಮೃತ್ಯು ಕವಿದ ಕವಿ ಹಾಸಿಗೆಯಮೇಲೆ ಬಿದ್ದುಬಿಟ್ಟನು.

(ಕ್ರಿ. ಶ. ೧೮೯೩)